



ಕರ್ನಾಟಕ
# ಸ್ಕೌಟ್ ಮತ್ತು ಗೈಡ್
ಮಾಸಿಕ ವಾರ್ತಾಪತ್ರಿಕೆ
# Karnataka Scout & Guide
Monthly News Magazine

Vol-15 Issue No. 10 October - 2018 ₹ 10/-



Sri. M. Venkaiah Naiduji, Hon'ble Vice-President of India, Chief Guest of V.P. Deenadayalu Naidu Birth Centenary Celebrations is Paying Floral Tributes to V.P. Deenadayalu Naidu's photograph. Sri. Vajubai Valaji, Hon'ble Governor of Karnataka & Patron of BS&G Sri. Bandeppa Kashempur, Hon'ble Minister for Co-operation (who deputised for Hon'ble Chief Minister of Karnataka Sri. H.D. Kumaraswamy) Sri. N. Mahesh, Hon'ble Minister for Primary & Secondary Education, Sri. U.T. Khader(in Uniform), Hon'ble Minister for Urban Development & Housing, Sri. P.G.R. Sindhia, Former Minister & State Chief Commissioner of Karnataka and Sri. S.G. Raveendra, Special Commissioner & District Chief Commissioner of BBMP District Association are seen.




Hon'ble Sri. M. Venkaiah Naiduji, Vice-President of India was welcomed by Cubs & Bulbuls on his arrival at Jnana Jyothi Auditorium. Hon'ble Governor of Karnataka Sri. Vajubai Valaji and SCC of Karnataka Sri. P.G.R. Sindhia were present.




**Sri M. Venkaiah Naiduji, Hon'ble Vice-President of India released a Booklet titled "A Tribute to a Leader" which contains a brief life sketch of V.P. Deenadayalu Naiduji. Seen in the picture from left to right, Sri Manoj Kumar Meena, Special Commissioner of BBMP, Hon'ble Ministers Sri Bandeppa Kashempur & Sri N. Mahesh, Sri P. C. Mohan, Hon'ble Member of Parliament, Sri Vajubai Valaji, Hon'ble Governor of Karnataka, Sri P.G.R. Sindhia, State Chief Commissioner, Smt. Gangambike Mallikarjuna, Mayor of BBMP, Hon'ble Minister Sri U.T. Khader, Dr. K.K. Khandelwal, Chief National Commissioner, BS&G, Dr. M.R. Jayaram, Chairman, Gokula Education Foundation & V.P. Deenadayalu Naidu Birth Centenary Celebration Committe & Sri S.G. Raveendra, Special Commissioner of BBMP.**



**A view of the Distinguished Invitees Family Members of V.P. Deenadayalu Naiduji Rovers-Rangers, Scout-Guide Leaders of Karnataka and representatives of Media & General Public assembled in large numbers at "Jnana Jyothi Auditorium" Palace Road, Bengaluru**





# ಕರ್ನಾಟಕ ಸ್ಕೌಟ್ ಮತ್ತು ಗೈಡ್

ಮಾಸಿಕ ವಾರ್ತಾಪತ್ರಿಕೆ





# KARNATAKA Scout & Guide

MONTHLY NEWS MAGAZINE

**"ಓದುಗರೆಲ್ಲರಿಗೂ ಕನ್ನಡ ರಾಜ್ಯೋತ್ಸವ ಹಾಗೂ ದೀಪಾವಳಿಯ ಹಾರ್ದಿಕ ಶುಭಾಶಯಗಳು"**

## ಸಂಪಾದಕ ಮಂಡಳಿ


ಪೋಷಕರು : ಪಿ.ಜಿ.ಆರ್. ಸಿಂಧ್ಯ

ಅಧ್ಯಕ್ಷರು : ಡಾ. ಗೊ.ರು. ಚನ್ನಬಸಪ್ಪ

ಉಪಾಧ್ಯಕ್ಷರು : ಕೊಂಡಜ್ಜಿ ಬ. ಷಣ್ಮುಖಪ್ಪ

ಸಂಪಾದಕರು : ಚಿನ್ನಸ್ವಾಮಿ ರೆಡ್ಡಿ

ಸಹಸಂಪಾದಕರು : ಎನ್. ಶ್ರೀನಿವಾಸನ್

ಸದಸ್ಯರು : ಕೆ. ಗಂಗಪ್ಪ ಗೌಡ

ಬಿ.ವಿ. ರಾಮಲತಾ

ಮೋಹನ್ ಕೊಂಡಜ್ಜಿ

ಬಿ.ಎಸ್. ರವೀಂದ್ರ

ಸಿ.ಪಿ. ಪರಮೇಶ್ವರ

ಕಮಲಾಕ್ಷಿ ಹೆಗಡೆ


## ಪರಿವಿಡಿ




ಸಂಚಿಕೆಯ ವಾರ್ಷಿಕ ಚಂದಾ ರೂ. 100/-

ವಿದ್ಯಾಸಂಸ್ಥೆ ಹಾಗೂ ಸಂಘ-ಸಂಸ್ಥೆಗಳಿಗೆ ವಾರ್ಷಿಕ ಚಂದಾ ರೂ.100/- ಚಂದಾಹಣವನ್ನು ಸಂಪಾದಕರು, ಕರ್ನಾಟಕ ಸ್ಕೌಟ್ ಮತ್ತು ಗೈಡ್ ಮಾಸಪತ್ರಿಕೆ ರಾಜ್ಯ ಕೇಂದ್ರ ಕಛೇರಿ, ಶಾಂತಿಗೃಹ #39 ಅರಮನೆ ರಸ್ತೆ, ಬೆಂಗಳೂರು-560 001 ಇಲ್ಲಿಗೆ ಕಳುಹಿಸಲು ಕೋರಿದೆ.



ದೂ: 080-2226 0017, 2226 7470

ನಮ್ಮ ಸಂಸ್ಥೆಯ ವೆಬ್‌ಸೈಟ್:
www.bsgkarnataka.org

ನಮ್ಮ ಸಂಸ್ಥೆಯ ಫೇಸ್‌ಬುಕ್:
The Bharat Scout-Guide, karnataka










# ರಾಜ್ಯ ಮುಖ್ಯ ಆಯುಕ್ತರ ನುಡಿ

ನನ್ನ ಪ್ರೀತಿಯ ಸ್ಕೌಟ್ಸ್ ಮತ್ತು ಗೈಡ್ಸ್ ಗೆಳೆಯರೇ,

ಸಸ್ನೇಹ ನಮಸ್ಕಾರಗಳು

9ನೇ ಅಕ್ಟೋಬರ್ 2018, ಕರ್ನಾಟಕ ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಯಲ್ಲಿ ಮಹತ್ವಪೂರ್ಣವಾದ ದಿವಸ. ಅಂದು ನಡೆದ ಶ್ರೀ ವಿ.ಪಿ. ದೀನದಯಾಳು ನಾಯ್ಡುರವರ ಜನ್ಮಶತಮಾನೋತ್ಸವದ ಸಮಾರೋಪ ಸಮಾರಂಭದಲ್ಲಿ ಭಾರತದ ಉಪ-ರಾಷ್ಟ್ರಪತಿಗಳಾದ ಸನ್ಮಾನ್ಯಶ್ರೀ ಎಂ. ವೆಂಕಯ್ಯನಾಯ್ಡು, ಕರ್ನಾಟಕದ ರಾಜ್ಯಪಾಲರಾದ ಸನ್ಮಾನ್ಯ ಶ್ರೀ ವಾಜುಬಾಯಿ ವಾಲಾರವರು ಮತ್ತು ಕರ್ನಾಟಕ ಸರ್ಕಾರದ ಸಚಿವರುಗಳು, ಸಂಸತ್ತು ಮತ್ತು ರಾಜ್ಯ ವಿಧಾನಸಭಾ ಸದಸ್ಯರು, ಪೂಜ್ಯ ಮಹಾಪೌರರು ಮತ್ತು ಹಲವಾರು ಗಣ್ಯರು, ನಮ್ಮ ಸಂಸ್ಥೆಯ ರಾಷ್ಟ್ರೀಯ ಪದಾಧಿಕಾರಿಗಳು ಭಾಗವಹಿಸಿದ್ದರಿಂದ ಕಾರ್ಯಕ್ರಮವು ಯಶಸ್ವಿಯಾಯಿತು.




ಮುಖ್ಯ ಆತಿಥಿಗಳಾಗಿದ್ದ ಸನ್ಮಾನ್ಯ ಉಪ-ರಾಷ್ಟ್ರಪತಿಯವರ ಸ್ಫೂರ್ತಿದಾಯಕ ಮಾತುಗಳು ಚಳವಳಿಗೆ ವಿಶೇಷವಾದ ಶಕ್ತಿ ತುಂಬುವಂತಿದ್ದವು. ದೀನದಯಾಳು ನಾಯ್ಡುರವರ ಜೀವನ ಮತ್ತು ಸಾಧನೆಯನ್ನು ಸ್ಮರಿಸಿದ ಉಪರಾಷ್ಟ್ರಪತಿಯವರು, ಶ್ರೀ ನಾಯ್ಡುರವರ ಕಾರ್ಯಶೈಲಿಯನ್ನು ಕೊಂಡಾಡಿದರು. ಜನಶಕ್ತಿಯಲ್ಲಿ ಅಪಾರವಾದ ನಂಬಿಕೆಯನ್ನು ಹೊಂದಿದ್ದ ಶ್ರೀ ದೀನದಯಾಳು ನಾಯ್ಡುರವರಂತಹ ಮಹನೀಯರ ಜನ್ಮಶತಮಾನೋತ್ಸವವು ಕಿರಿಯರಿಗೆ ಸ್ಫೂರ್ತಿಯನ್ನು ತುಂಬುತ್ತದೆಂದೂ, ಅವರ ಆದರ್ಶಗಳನ್ನು ಇಂದಿನ ಪೀಳಿಗೆ ಪಾಲಿಸಬೇಕೆಂದು ಕರೆಕೊಟ್ಟರು.

ಭವ್ಯ ಸಮಾಜದ ನಿರ್ಮಾಣಕ್ಕೆ ಅಗತ್ಯವಾದ ನಾಲ್ಕು **"C"**ಗಳೆಂದರೆ **"Character, Capability, Caliber and Contact"**, ಸಮಾಜವನ್ನು ಕಲುಷಿತಗೊಳಿಸುವ ನಾಲ್ಕು **"C"**ಗಳೆಂದರೆ, **"Caste, Communal, Cash,** ಮತ್ತು **Criminality".** – ಚಾರಿತ್ರ್ಯ ನಿರ್ಮಾಣದ ಬಗ್ಗೆ ಮಾನ್ಯ ಉಪರಾಷ್ಟ್ರಪತಿಗಳ ಈ ವರ್ಣನೆ ಎಲ್ಲರ ಮನಮುಟ್ಟುವಂತಿದ್ದವು. ಸಮಾಜದ ನೈತಿಕ ಮೌಲ್ಯಗಳನ್ನು ಸ್ಕೌಟ್ಸ್‌ಗಳು ಕಾಪಾಡಬೇಕು ಎಂದು ಹುರಿದುಂಬಿಸಿದ ಶ್ರೀ ನಾಯ್ಡುರವರು **"Share and Care"** ತತ್ವವು ಭಾರತೀಯ ಚಿಂತನೆಯ ತಿರುಳಾಗಿದೆ ಎಂದು ಹೇಳಿದರು. ಸ್ಕೌಟ್ ಚಳವಳಿಯ ಹಲವಾರು ಪ್ರಮುಖ ಉದ್ದೇಶಗಳ ಬಗ್ಗೆ ಅವರು ಮಾತನಾಡಿದ್ದು, ನನಗೆ ಬಹಳ ಸಂತೋಷವನ್ನುಂಟುಮಾಡಿತು. ಹವಾಮಾನ ಬದಲಾವಣೆ, ತತ್ಪರಿಣಾಮವಾಗಿ ಉಂಟಾಗಿರುವ ಅತಿವೃಷ್ಟಿ ಮತ್ತು ಅನಾವೃಷ್ಟಿ, ನಮ್ಮ ಪ್ರಕೃತಿ ಮತ್ತು ಸಂಸ್ಕೃತಿಯ ನಿರ್ಲಕ್ಷ್ಯದಿಂದ ಉಂಟಾಗುವ ದಟ್ಟಣೆ, ಪರಿಸರ ಮಾಲಿನ್ಯ ಮತ್ತು ಸಾಮಾಜಿಕ ಒತ್ತಡಗಳ ಬಗ್ಗೆ ನಾವು ಗಮನ ಕೊಡದೇ ಇರುವುದು, ಸಾಮಾಜಿಕ ವಿಷಮತೆಗೆ ಕಾರಣವಾಗಿದೆ ಎಂಬ ಕಿವಿಮಾತನ್ನು ಆಡುವುದರ ಜೊತೆಗೆ ಸೌರಶಕ್ತಿಯ ಬಳಕೆ, ಮಳೆ ನೀರಿನ ಸಂರಕ್ಷಣೆ, ಸ್ವಚ್ಛಭಾರತದ ನಿರ್ಮಾಣ ಇಂದಿನ ಅಗತ್ಯಗಳಾಗಿದೆ ಎಂದು ಒತ್ತಿ ಹೇಳಿದರು. ಸಂಪೂರ್ಣ

ಲಕ್ಷ್ಯರತೆಯತ್ತ ನಮ್ಮ ನಡಿಗೆ, ಸಮಾಜದ ಕಟ್ಟಕಡೆಯ ವ್ಯಕ್ತಿಯ ಜವಾಬ್ದಾರಿಯನ್ನು ನಾವು ತೆಗೆದುಕೊಳ್ಳಬೇಕೆಂದು ಕರೆ ನೀಡಿದರು.

ವಿದ್ಯಾರ್ಥಿ ದೆಸೆಯಿಂದ ನನಗೆ ಪರಿಚಯವಿರುವ ಸನ್ಮಾನ್ಯ ಶ್ರೀ ವೆಂಕಯ್ಯನಾಯ್ಡುರವರು ಕರ್ನಾಟಕದ ಸ್ಕೌಟ್ಸ್ ಸಂಸ್ಥೆಯನ್ನು ಒಂದು ಮಾದರಿ ಸಂಸ್ಥೆ ಎಂದು ಕರೆದಿದ್ದು ನಮ್ಮೆಲ್ಲರಿಗೂ ಹೆಮ್ಮೆ ತಂದಿದೆ. ಸ್ಕೌಟ್ಸ್ ಮತ್ತು ಗೈಡ್ಸ್‌ನ ಆದರ್ಶಗಳನ್ನು ಬಹುವಾಗಿ ಮೆಚ್ಚಿದ ಉಪ-ರಾಷ್ಟ್ರಪತಿಯವರು ಎಲ್ಲಾ ಶಾಲಾ-ಕಾಲೇಜುಗಳಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಯನ್ನು ಕಡ್ಡಾಯವಾಗಿ ಜಾರಿಗೆ ತರುವತ್ತ ಪ್ರಯತ್ನ ಮಾಡುತ್ತೇನೆಂದು ನೀಡಿದ ಭರವಸೆ ಚಳವಳಿಗೆ ಆನೆ ಬಲ ಬಂದಂತಾಗಿದೆ.

"ನಾವೆಲ್ಲರೂ ಒಂದೇ ಯಾರೂ ಹೆಚ್ಚಿನವರಲ್ಲ, ಯಾರೂ ಕಡಿಮೆಯಲ್ಲ ರಾಷ್ಟ್ರಕ್ಕಾಗಿ ಯಾರು ಬದುಕುತ್ತಾರೋ ಅವರು ಅಮರರು" ಎಂಬ ವಿವೇಕಾನಂದರ ವಾಣಿಯನ್ನು ಜ್ಞಾಪಿಸಿಕೊಂಡ ಸನ್ಮಾನ್ಯ ರಾಜ್ಯಪಾಲ ವಾಜುಬಾಯಿ ವಾಲಾರವರು ಸ್ಕೌಟ್ ಮಕ್ಕಳು ತಾವು ಮಾಡುವ ಕೆಲಸದ ಪರಿಣಾಮವನ್ನು ಅರ್ಥಮಾಡಿಕೊಂಡು ಕೆಲಸ ಮಾಡಬೇಕು. **"Simple Living and High Thinking"** ನಮ್ಮ ಜೀವನದ ಮೂಲತತ್ವವಾಗಬೇಕೆಂದು ಹೇಳಿದರು. ಒಂದು ದೀಪದಿಂದ ಮತ್ತೊಂದು ದೀಪವನ್ನು ಹಚ್ಚಿದರೆ ನಮ್ಮ ಸುತ್ತಲಿನ ವಾತಾವರಣವೆಲ್ಲವೂ ಪ್ರಕಾಶಮಾನವಾಗಿರುತ್ತದೆ ಎಂಬ ಉದಾಹರಣೆ ನೀಡುವ ಮೂಲಕ ಸ್ಫೂರ್ತಿದಾಯಕವಾದ ಭಾಷಣ ಮಾಡಿದರು.

ಅದೇ ದಿನದಂದು ಹಿರಿಯ ಸ್ಕೌಟರ್ ಗೈಡರ್‌ಗಳನ್ನು ಮತ್ತು ನಮ್ಮ ಸಂಸ್ಥೆಯ ನಿವೃತ್ತ ನೌಕರರನ್ನು





ಅಭಿನಂದಿಸಿದ್ದು, ಮತ್ತು ಕಳೆದ ವರ್ಷದ ಎಸ್‌ಎಸ್‌ಎಲ್‌ಸಿ ಪರೀಕ್ಷೆಯಲ್ಲಿ ಶೇ.95 ಮತ್ತು ಅದಕ್ಕಿಂತ ಹೆಚ್ಚು ಅಂಕಗಳನ್ನು ಗಳಿಸಿದ ಸ್ಕೌಟ್ಸ್ ಮತ್ತು ಗೈಡ್ಸ್ ಮಕ್ಕಳಿಗೆ ಪ್ರತಿಭಾ ಪುರಸ್ಕಾರ ಕಾರ್ಯಕ್ರಮವನ್ನು ಆಯೋಜಿಸಿದ್ದು, ಸಂದರ್ಭೋಚಿತವಾಗಿತ್ತು. ಹಿರಿಯ ಸ್ಕೌಟರ್‌ಗಳ ತ್ಯಾಗ ಮತ್ತು ಸೇವೆಯಿಂದ ಸ್ಕೌಟ್ ಸಂಸ್ಥೆ ಇಂದು ಇಷ್ಟು ಪ್ರಬಲವಾಗಿ ಬೆಳೆದಿದೆ. ಹಿರಿಯರ ಸದ್ಗುಣಗಳನ್ನು ಅನುಸರಿಸುವ ಮತ್ತು ಕಿರಿಯರಿಗೆ ಮಾರ್ಗದರ್ಶನ ನೀಡಬಲ್ಲ ಈ ಪ್ರತಿಭಾನ್ವಿತ ವಿದ್ಯಾರ್ಥಿಗಳು ನಮ್ಮ ಸಮಾಜದ ಆಸ್ತಿ. ಪ್ರತಿಯೊಬ್ಬರನ್ನೂ ವೈಯಕ್ತಿಕವಾಗಿ ನಾನು ಅಭಿನಂದಿಸುತ್ತೇನೆ.

ನವೆಂಬರ್ 7 ಧ್ವಜದಿನಾಚರಣೆ. ಭಾರತದಲ್ಲಿ ಸ್ಕೌಟ್ ಚಳವಳಿ ಅಧಿಕೃತವಾಗಿ 1917ರಂದು ಆರಂಭಗೊಂಡಿತ್ತು. ನಂತರ ಕ್ರಮೇಣ ದೇಶದ ನಾನಾ ಭಾಗಗಳಲ್ಲಿ ಸ್ಕೌಟ್ ದಳಗಳನ್ನೂ, ತಂಡಗಳನ್ನೂ ಪ್ರಾರಂಭಿಸಲಾಯಿತು. ಬಾಲಕರಿಗೆ ಸ್ಕೌಟ್ ಸಂಘಟನೆ ಇದ್ದಂತೆ ಬಾಲಕಿಯರಿಗಾಗಿ ಗೈಡ್ಸ್ ಸಂಘಟನೆಯೂ ಆರಂಭವಾಯಿತು. ಭಾರತಕ್ಕೆ ಸ್ವಾತಂತ್ರ್ಯ ಬರುವ ಮುನ್ನ ನ್ಯಾಷನಲ್ ಸ್ಕೌಟ್ಸ್ ಅಸೋಸಿಯೇಷನ್, ಹಿಂದೂಸ್ತಾನ್ ಸ್ಕೌಟ್ಸ್ ಅಸೋಸಿಯೇಷನ್, ಗರ್ಲ್ಸ್‌ಗೈಡ್



ಅಸೋಸಿಯೇಷನ್- ಹೀಗೆ ಅನೇಕ ಸಂಘಟನೆಗಳಿದ್ದವು. 1947ರಲ್ಲಿ ದೇಶಕ್ಕೆ ಸ್ವಾತಂತ್ರ್ಯ ಬಂದ ನಂತರ ಈ ಎಲ್ಲ ಸಂಘಟನೆಗಳೂ ಒಂದುಗೂಡಿ ಒಂದೇ ಸಂಘಟನೆಯಾಗಬೇಕೆಂದು ನಿರ್ಧರಿಸಿದವು. ಆ ನಿರ್ಧಾರದ ಫಲವಾಗಿ 1950ರ ನವೆಂಬರ್ 07 ರಂದು "ಭಾರತ್ ಸ್ಕೌಟ್ಸ್ ಮತ್ತುಗೈಡ್ಸ್" ಸಂಸ್ಥೆ ಅಸ್ಥಿತ್ವಕ್ಕೆ ಬಂದಿತು. ಹಾಗಾಗಿ ನವೆಂಬರ್ 7 ರಂದು ನಾವು ಧ್ವಜದಿನಾಚರಣೆಯನ್ನು ಆಚರಿಸುತ್ತೇವೆ. ನೀವೆಲ್ಲರೂ ತುಂಬ ಉತ್ಸಾಹದಿಂದ ಧ್ವಜದಿನಾಚರಣೆಯನ್ನು ಆಚರಿಸಬೇಕು.

ನವೆಂಬರ್ 1ನೇ ತಾರೀಖು ನಾವು 62ನೆಯ ಕನ್ನಡ ರಾಜ್ಯೋತ್ಸವವನ್ನು ಆಚರಿಸುತ್ತಿದ್ದೇವೆ. 1956 ನವೆಂಬರ್ 1ನೇ ತಾರೀಖು ನಮ್ಮ ರಾಜ್ಯವು ಏಕೀಕರಣಗೊಂಡು ಅಸ್ತಿತ್ವವನ್ನು ಪಡೆಯಿತು. ರಾಜರುಗಳ, ಬ್ರಿಟಿಷರ ವಿವಿಧ ಪ್ರಾಂತ್ಯಗಳ ಆಡಳಿತದಲ್ಲಿ ಹಂಚಿಹೋಗಿದ್ದ ಕನ್ನಡ ನಾಡಿಗಾಗಿ ಹೋರಾಡಿದವರು, ಹಿರಿಯ ಸಾಹಿತಿಗಳು, ಸಾಂಸ್ಕೃತಿಕ ಮತ್ತು ಸಾಮಾಜಿಕ ಧುರೀಣರು. ಕಳೆದ 62 ವರ್ಷಗಳಲ್ಲಿ ಕರ್ನಾಟಕವು ಹೆಚ್ಚಿನ ಪ್ರಗತಿಯನ್ನು ಸಾಧಿಸಿದೆ. ಸಾಧಿಸಬೇಕಾದ ಗುರಿ ಸಾಕಷ್ಟು ದೂರವಿದೆ. ನಾವೆಲ್ಲರೂ ಒಗ್ಗಟ್ಟಾಗಿ ನಾಡಿನ, ದೇಶದ ಬೆಳವಣಿಗೆಗಾಗಿ ಪ್ರಯತ್ನ ಮಾಡಬೇಕು. ಕನ್ನಡ ಭಾಷೆಯನ್ನು ಸಶಕ್ತಗೊಳಿಸಬೇಕು. ಸಾಹಿತ್ಯದಲ್ಲಿ ಮಾತ್ರವಲ್ಲದೆ ವಿಜ್ಞಾನ, ತಾಂತ್ರಿಕತೆ, ವ್ಯವಹಾರಿಕ ಕ್ಷೇತ್ರ, ಗಣಿತ ಕ್ಷೇತ್ರಗಳಲ್ಲಿ ಕನ್ನಡ ಭಾಷೆ ವಿಸ್ತಾರಗೊಳ್ಳಬೇಕಾಗಿದೆ. ಅದಕ್ಕೆ ಅಗತ್ಯವಾದ ಪಾಂಡಿತ್ಯವನ್ನು, ಮನೋಧಾರ್ಡ್ಯವನ್ನು ನಾವು ಗಳಿಸಿಕೊಳ್ಳಬೇಕಾಗಿದೆ.






ನವೆಂಬರ್ 1 ರಿಂದ 4ರವರೆಗೆ ನಾವು "ರಾಷ್ಟ್ರಮಟ್ಟದ ರೋವರ್-ರೇಂಜರ್ ಮೂಟ್" ಅನ್ನು ಚಿಕ್ಕಬಳ್ಳಾಪುರ ಜಿಲ್ಲೆಯ ಮುದ್ದೇನಹಳ್ಳಿಯಲ್ಲಿರುವ "ಶ್ರೀ ಸತ್ಯಸಾಯಿ ಗ್ರಾಮ"ದಲ್ಲಿ ನಡೆಸಲಿದ್ದೇವೆ. ಮೂಟ್‌ನ ಬಗ್ಗೆ ವಿವರವಾಗಿ ಮುಂದಿನ ಸಂಚಿಕೆಯಲ್ಲಿ ಬರೆಯಲಿದ್ದೇನೆ. ನವೆಂಬರ್ ತಿಂಗಳಿನಲ್ಲಿ ದೀಪಾವಳಿ, ಈದ್‌ಮಿಲಾದ್ ಮುಂತಾದ ಪ್ರಮುಖ ಹಬ್ಬಗಳು ಇವೆ. ಹಸಿರು ದೀಪಾವಳಿಯನ್ನು ಆಚರಿಸಬೇಕೆಂದು ಸುಪ್ರಿಂಕೋರ್ಟ್ ಆದೇಶ ನೀಡಿದೆ. ಸುಪ್ರಿಂಕೋರ್ಟ್‌ನ ನಿರ್ದೇಶನವನ್ನು ನಾವು ಶ್ರದ್ಧೆಯಿಂದ ಅನುಸರಿಸಬೇಕು.

ತಮ್ಮ ವಿಶ್ವಾಸಿ

**(ಪಿ.ಜಿ.ಆರ್. ಸಿಂಧ್ಯ)**

ರಾಜ್ಯ ಮುಖ್ಯ ಆಯುಕ್ತರು

ಹೆಚ್.ಡಿ. ಕುಮಾರಸ್ವಾಮಿ

ಮುಖ್ಯ ಮಂತ್ರಿ




ವಿಧಾನ ಸೌಧ

ಬೆಂಗಳೂರು - 560 001

ದಿನಾಂಕ 06/10/2018

ಸಿಎಂ/47/ಸಿಎಂಆರ್‌ಎಫ್/ಜಿಇಎನ್/2018

ಮಾನ್ಯರೇ,

ರಾಜ್ಯದ ಕೊಡಗು ಸೇರಿ ಹಲವು ಜಿಲ್ಲೆಗಳಲ್ಲಿ ಪ್ರಕೃತಿ ವಿಕೋಪದಿಂದಾಗಿ ಸುರಿದ ಭಾರಿ ಮಳೆ ಹಾಗೂ ಗುಡ್ಡ ಕುಸಿತದಿಂದಾಗಿ ಸಂಕಷ್ಟಕ್ಕೆ ಒಳಗಾದ ಸಂತ್ರಸ್ತರಿಗೆ ನೆರವಾಗಲೆಂದು ತಾವು ಸ್ಪಂದಿಸಿರುವುದು ಅತ್ಯಂತ ಮಾನವೀಯ ಔದಾರ್ಯವೆಂದು ನಾನು ಭಾವಿಸಿದ್ದೇನೆ.

ಮುಖ್ಯಮಂತ್ರಿಗಳ ಪರಿಹಾರ ನಿಧಿಗೆ ತಾವು ಧನಾದೇಶ ಸಂಖ್ಯೆ : 945479, ದಿನಾಂಕ: 15/09/2018ರ ಮೂಲಕ ರೂ.1,71,536/-(ಒಂದು ಲಕ್ಷ ಎಪ್ಪತ್ತೊಂದು ಸಾವಿರದ ಐದುನೂರ ಮೂವತ್ತಾರು ರೂಪಾಯಿಗಳು)ಗಳ ಮೊತ್ತದ ದೇಣಿಗೆ ಸಲ್ಲಿಸಿ ಸರ್ಕಾರದೊಂದಿಗೆ ಕೈಜೋಡಿಸಿರುವುದು ಶ್ಲಾಘನೀಯ ವಿಷಯವಾಗಿರುತ್ತದೆ. ನೀವು ನೀಡಿರುವ ದೇಣಿಗೆಯ ಮೊತ್ತವನ್ನು ಹೃದಯಪೂರ್ವಕವಾಗಿ ಸ್ವೀಕರಿಸಲಾಗಿದ್ದು, ಕೊಡಗು ಮತ್ತು ಇತರೇ ಜಿಲ್ಲೆಗಳಲ್ಲಿ ಮಳೆಯಿಂದಾಗಿ ಹಾನಿಯಾದ ಪ್ರದೇಶಗಳ ಅಭಿವೃದ್ಧಿಗಾಗಿ ಮತ್ತು ಸಂತ್ರಸ್ತರಿಗೆ ನೆರವಾಗಲು ತಮ್ಮ ಈ ಅಮೂಲ್ಯ ಸಹಾಯವನ್ನು ಉಪಯೋಗಿಸಲು ಸರ್ಕಾರವು ಪ್ರಾಮಾಣಿಕವಾಗಿ ಶ್ರಮಿಸುತ್ತದೆ.

ಮಾನವೀಯ ನೆಲೆಯಲ್ಲಿ ತಾವು ನೀಡಿರುವ ಸಹಕಾರ ನಿರಂತರವಾಗಿ ಹೀಗೆಯೇ ಮುಂದುವರೆಯಲಿ ಎಂದು ಆಶಿಸುತ್ತಾ, ತಮ್ಮ ಈ ಉದಾರವಾದ ದೇಣಿಗೆಗಾಗಿ ಸರ್ಕಾರದ ಪರವಾಗಿ ನನ್ನ ಕೃತಜ್ಞತೆಗಳನ್ನು ಸಲ್ಲಿಸುತ್ತಿದ್ದೇನೆ.

ಗೌರವಪೂರ್ವಕ ವಂದನೆಗಳೊಂದಿಗೆ,




ತಮ್ಮ ವಿಶ್ವಾಸಿ

(ಹೆಚ್.ಡಿ. ಕುಮಾರಸ್ವಾಮಿ)

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್,
ಜಿಲ್ಲಾ ಕೇಂದ್ರ ಕಾರ್ಯಾಲಯ,
ನಂ. 342, ರಾಯ್ ರಸ್ತೆ, ತಿಲಕವಾಡಿ
ಬೆಳಗಾವಿ-590006.

### Valedictory Function of
### Birth Centenary Celebrations of
# V.P. Deenadayalu Naidu

held on 09th October 2018 at Bengaluru





"Bharat Scouts and Guides, NCC & NSS should be made compulsory for Students all over the Country"

**M. Venkaiah Naidu**
Vice-President of India.

"The Bharat Scouts and Guides, National Cadet Corps (NCC) and the National Service Scheme (NSS) should be made compulsory in Schools and Colleges around the Country to encourage Social Responsibility among the Youth. The Educational Institutions in the Country should encourage these activities as Compulsory as part of their syllabus" said Hon'ble Sri M.Venkaiah Naiduji, Vice-President of India on 9th October 2018 at Jnanajyothi Auditorium, Bengaluru.

He was speaking at the Valedictory Function of Birth Centenary Celebrations of V.P.Deenadayalu Naiduji, Freedom Fighter, Former Mayor of Bengaluru, Former Legislator of Karnataka and National Commissioner, The Bharat Scouts and Guides, India. He said, "By participating in these extra curricular activities help the students in inculcating with Nationalism, Social Consciousness, National Integration, Loyalty to the Country, Character Building, Service to the Society and to their family members."

He further said, "Today students are learning Science without Moral in their classes. It is very much the need of the hour to introduce moral science in the curriculum, as we are loosing our Cultural heritage and concern for the needy in the Society."

He also said, "The Leaders like V.P.Deenadayalu Naiduji who have contributed for several decades in the fields of Social, Educational, Spiritual aspects and for the growth and development of Scouting and Guiding in the Country are very few and therefore it is the responsibility of the society to remember such distinguished members by organizing their Birthdays to bring home to the present Youth the sacrifices made by them."



Earlier Sri M. Venkaiah Naiduji. Vice-President of India, inaugurated the Programme and released a Book entitled "A Tribute to a Leader", a brief life sketch about different facets of public life and service to society by V. P. Deenadayalu Naiduji, which is spread over more than six decades.





Sri Vajubai Valaji, Hon'ble Governor of Karnataka and Patron of the Bharat Scouts and Guides, Karnataka speaking on the occasion said that we must remember the distinguished services rendered by V. P. Deenadayalu Naiduji for more than Six Decades in different fields which itself a great tribute to a distinguished son of Karnataka.

Sri Bandeppa Kashempur, Hon'ble Minister for Co-operation representing Sri H.D. Kumaraswamy, Hon'ble Chief Minister of Karnataka and President of the Bharat Scouts and Guides addressed the participants by reading the message of the Hon'ble Chief Minister. Dr. K. K. Khandelwal, Chief National Commissioner, Bharat Scouts and Guides spoke on the occasion and highlighted the exemplary services rendered by Sri V.P. Deenadayalu Naiduji in different fields like Social Service, Freedom Struggle and particularly his committed services in strengthening the Scout Guide Movement in Karnataka and all over the Country.

Sri U.T. Khader, Hon'ble Minister for Housing and Urban Development, Sri N. Mahesh, Hon'ble Minister for Primary and Secondary Education, Smt. Gangambika Mallikarjun, Mayor and Patron, Bharat Scouts and Guides, BBMP District Association, Sri P.C.Mohan, Member of Lokasabha (Bengaluru Central) and Vice Chairman of Sri V.P. Deenadayalu Naidu Birth Centenary Celebration Committee, Dr.M.R.Jayaram, Chairman, Gokula Education Foundation and Sri V.P.Deenadayalu Naidu Birth Centenary Celebration Committee, Sri Manoj Kumar Meena & Sri S.G. Raveendra, Special Commissioners, BBMP, Smt Gangamma, Chairman, Education Committee of BBMP were present.






Sri P.G.R. Sindhia, State Chief Commissioner, The Bharat Scouts and Guides, Karnataka and the Working Chairman of the V. P. Deenadayalu Naidu Birth Centenary Celebrations Committee in his introductory address highlighted the Life and Achievements of V. P. Deenadayalu Naiduji and brought to the knowledge of distinguished invitees and members of the Public & Media the growth of Scout / Guide Movement in Karnataka.

Earlier, Sri S.G.Raveendra, IIS, Special Commissioner (Education) BBMP welcomed the Chief Guests, Guests of Honour, Special Invitees, Invitees and the family members of V.P.Deenadayalu Naiduji, Rovers and Rangers / Scout Guide Leaders from all over Karnataka, Members of the Press & Electronic Media and the general public.

Miss. P. Saroja, District Chief Commissioner, Bengaluru North District Association and Sri M.S. Satheesh, District Secretary, Bengaluru South District Association assisted this Programme. Nearly 2000 Rovers and Rangers drawn from all over the State and BBMP attended this memorable event.

This Programme was sponsored by the BBMP in association with the BS&G Karnataka State. Sri K.Gangappa Gowda, Joint State Secretary, Smt K.R. Pallavi, Asst. Commissioner, (Education) BBMP and District Secretary were the Masters of Ceremony. Sri M.A. Chellaiah, Nodal Officer (Scouts & Guides), & Convenor of Sri V.P. Deenadayalu Naidu Birth Centenary Celebration Committee proposed Hearty Vote of thanks to the Distinguished Guests, Invitees and Members of V.P.Deenadayalu Naidu Family & Scout / Guide Leaders, Office-Bearers of State Headquarters & Office-bearers of V.P. Deenadayalu Naidu Birth Centenary Celebration Committee, Press & Media.



# ಅಭಿನಂದನಾ ಸಮಾರಂಭ

ಅಕ್ಟೋಬರ್ 9 ರಂದು ಜ್ಞಾನ ಜ್ಯೋತಿ ಸಭಾಂಗಣ, ಅರಮನೆ ರಸ್ತೆ, ಬೆಂಗಳೂರು ಇಲ್ಲಿ 2017-18ನೇ ಸಾಲಿನಲ್ಲಿ ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ 95% ಕ್ಕಿಂತ ಹೆಚ್ಚು ಅಂಕ ಗಳಿಸಿದ ಸ್ಕೌಟ್-ಗೈಡ್‌ಗಳನ್ನು ಅಭಿನಂದಿಸಿ ಗೌರವಿಸಲಾಯಿತು.



ಇದೇ ಸಂದರ್ಭದಲ್ಲಿ ಸ್ಥಳೀಯ ಸಂಸ್ಥೆ, ಜಿಲ್ಲಾ ಸಂಸ್ಥೆ ಮತ್ತು ಸ್ಕೌಟಿಂಗ್-ಗೈಡಿಂಗ್ ಅಭಿವೃದ್ಧಿಗೆ ಸೇವೆ ಸಲ್ಲಿಸಿರುವ ಶಿಕ್ಷಕರು-ಶಿಕ್ಷಕಿಯರು ಹಾಗೂ ಪದಾಧಿಕಾರಿಗಳನ್ನು 2017-18ನೇ ಸಾಲಿನ ಏಷಿಯಾ ಫೆಸಿಫಿಕ್ ರೀಜನಲ್ ಪ್ರಶಸ್ತಿ ಪಡೆದ 16 ಗೈಡ್ ವಿಭಾಗದ ಸಾಧಕಿಯರನ್ನು ಮತ್ತು ಭಾರತ್ ಸ್ಕೌಟ್ಸ್-ಗೈಡ್ಸ್ ರಾಜ್ಯ ಸಂಸ್ಥೆಯಲ್ಲಿ ಸೇವೆ ಸಲ್ಲಿಸಿ ನಿವೃತ್ತರಾದ ಸಿಬ್ಬಂದಿ ವರ್ಗದವರನ್ನು ಗೌರವಿಸಿ ಅಭಿನಂದಿಸಲಾಯಿತು.

ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ಉಪಾಧ್ಯಕ್ಷರು, ಭಾರತ್ ಸ್ಕೌಟ್ಸ್-ಗೈಡ್ಸ್, ಕರ್ನಾಟಕ ಇವರು ಅಧ್ಯಕ್ಷೀಯ ನುಡಿಗಳಲ್ಲಿ ಸಮಾರಂಭದಲ್ಲಿ ಭಾಗವಹಿಸಿದ ಎಲ್ಲಾ ಸ್ಕೌಟ್ಸ್-ಗೈಡ್ಸ್‌ಗಳನ್ನು ಅಭಿನಂದಿಸಿದರು ಮತ್ತು ಮುಂದಿನ ಜವಾಬ್ದಾರಿ ಹಾಗು ಸ್ಕೌಟಿಂಗ್-ಗೈಡಿಂಗ್ ಅಭಿವೃದ್ಧಿಗೆ ತಮ್ಮ ಸೇವೆ ಅಮೂಲ್ಯವಾದದ್ದು ಎಂದು ಹೇಳಿದರು.



ಶ್ರೀ ಪಿ.ಜಿ.ಆರ್. ಸಿಂಧ್ಯ, ರಾಜ್ಯ ಮುಖ್ಯ ಆಯುಕ್ತರು ಮಾತನಾಡಿ ಮಕ್ಕಳನ್ನು ಮತ್ತು ಶಿಕ್ಷಕರನ್ನು ಗೌರವಿಸಲು ಹೆಮ್ಮೆ ಮತ್ತು ಸಂತೋಷವೆನಿಸುತ್ತದೆ. ಇದು ರಾಜ್ಯ ಸಂಸ್ಥೆಗೆ ಕೃತಜ್ಞತೆಗಳನ್ನು ಸಲ್ಲಿಸುವ ಅವಕಾಶ. ಶಿಕ್ಷಕರ ಜವಾಬ್ದಾರಿ ಇನ್ನು ಹೆಚ್ಚು ಇದೆ. ಕರ್ನಾಟಕ ಸ್ಕೌಟಿಂಗ್ ಅಭಿವೃದ್ಧಿಗೆ ನಿಮ್ಮ ಹೆಚ್ಚಿನ ಸಮಯ ನೀಡಿ ಮಕ್ಕಳನ್ನು ಸಿದ್ಧಪಡಿಸಿ ಸಮಾಜದಲ್ಲಿ ಮೌಲ್ಯಗಳನ್ನು ಹೆಚ್ಚು ಹೆಚ್ಚು ಬೆಳೆಸೋಣ ಎಂದು ತಿಳಿಸಿದರು.



ನಾಡೋಜ ಡಾ. ಮಹೇಶ್ ಜೋಷಿ ಇವರು ಮುಖ್ಯ ಅತಿಥಿಗಳಾಗಿ ಆಗಮಿಸಿದ್ದರು. ಅವರು ಮಾತನಾಡುತ್ತಾ ಎಸ್.ಎಸ್.ಎಲ್.ಸಿ. ಹಂತದಲ್ಲಿ ಕೇವಲ ಓದಲು ಪೋಷಕರು ಒತ್ತಡ ಹಾಕುತ್ತಾರೆ. ಆದರೆ ಈ ಮಕ್ಕಳು ಸ್ಕೌಟಿಂಗ್‌ನಲ್ಲಿ ಇದ್ದರೂ ಸಹ 95% ಅಂಕಗಳನ್ನು ಗಳಿಸಿರುವುದು ಬಹಳ ಶ್ಲಾಘನೀಯ ಎಂದು ನುಡಿದರು. ನಂತರ ಒಂದು ಹಾಡಿನ ಮೂಲಕ ಎಲ್ಲರನ್ನು ರಂಜಿಸಿದರು.

ಸಮಾರಂಭದಲ್ಲಿ ಶ್ರೀ ಎಂ.ಎ. ಖಾಲಿದ್, ರಾಜ್ಯ ಸ್ಕೌಟ್ ಆಯುಕ್ತರು, ಶ್ರೀಮತಿ ಗೀತಾ ನಟರಾಜ್, ರಾಜ್ಯ ಗೈಡ್ ಆಯುಕ್ತರು, ಶ್ರೀ ಕೆ. ಗಂಗಪ್ಪ ಗೌಡ, ರಾಜ್ಯ ಜಂಟಿ








ಕಾರ್ಯದರ್ಶಿ (ಸ್ಕೌ)., ಶ್ರೀಮತಿ ಬಿ.ವಿ. ರಾಮಲತಾ, ರಾಜ್ಯ ಜಂಟಿ ಕಾರ್ಯದರ್ಶಿ(ಗೈ) ಶ್ರೀ ಎಂ. ವಿಶ್ವನಾಥ್, ಜಿಲ್ಲಾ ಮುಖ್ಯ ಆಯುಕ್ತರು, ಶ್ರೀ ಮೋಹನ್ ಕುಮಾರ್ ಕೊಂಡಜ್ಜಿ, ರಾಜ್ಯ ಕೇಂದ್ರ ಸ್ಥಾನಿಕ ಆಯುಕ್ತರು(ಸ್ಕೌ) ಹಾಗೂ ಸಂಸ್ಥೆಯ ಎಲ್ಲಾ ಪದಾಧಿಕಾರಿಗಳು ಭಾಗವಹಿಸಿದ್ದರು.





## ಅಭಿನಂದನೆಗಳು



### ವಿಶೇಷ ಶಿಕ್ಷಕ ರಾಜ್ಯ ಪ್ರಶಸ್ತಿ

**ಶ್ರೀ ಡಿ.ವಿ. ಮುನಿಸ್ವಾಮಿ**

ಸ್ಕೌಟ್ ಮಾಸ್ಟರ್ ಹಾಗೂ ಮುಖ್ಯ ಶಿಕ್ಷಕರು
ಸರ್ಕಾರಿ ಕಿರಿಯ ಪ್ರಾಥಮಿಕ ಶಾಲೆ
ಚೌಳು ತೋಟ, ಕುಂಬಳಹಳ್ಳಿ
ಹೊಸಕೋಟೆ ತಾ॥ ಬೆಂಗಳೂರು ಗ್ರಾಂ. ಜಿಲ್ಲೆ

– ಸಂಪಾದಕರು

# JOTA-JOTI

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ ರಾಜ್ಯ ಸಂಸ್ಥೆಯ ವತಿಯಿಂದ ಅಕ್ಟೋಬರ್ 20ರಂದು **JOTA-JOTI** ಕಾರ್ಯಕ್ರಮವನ್ನು ರಾಜ್ಯ ಕೇಂದ್ರ ಕಛೇರಿ, ಶಾಂತಿಗೃಹ, ಬೆಂಗಳೂರಿನಲ್ಲಿ ಆಯೋಜಿಸಲಾಗಿತ್ತು. ಸದರಿ ಕಾರ್ಯಕ್ರಮದಲ್ಲಿ ಬೆಂಗಳೂರು ಅಮೆಚುರ್ ರೇಡಿಯೊ ಕ್ಲಬ್‌ನ ಶ್ರೀ. ವಿಜಯ ಕುಮಾರ್ ಮತ್ತು 12 ಜನರ ತಂಡ ಸ್ಕೌಟ್ಸ್-ಗೈಡ್ಸ್‌ಗಳಿಗೆ ರೇಡಿಯೊ ತರಂಗಗಳ ಮೂಲಕ ಇತರ ರಾಜ್ಯದ ಮತ್ತು ಜಿಲ್ಲೆಗಳ ಸ್ಕೌಟ್ಸ್-ಗೈಡ್ಸ್ ಮಕ್ಕಳೊಂದಿಗೆ ವಿಷಯವನ್ನು ವಿನಿಮಯ ಮಾಡಿಸಿದರು ಹಾಗು ಹಾಡು, ಚಪ್ಪಾಳೆ ಮುಂತಾದ ಚಟುವಟಿಕೆಗಳನ್ನು ನೆರವೇರಿಸಲಾಯಿತು.

ಶ್ರೀ ಮಧುಕರ, ಹವ್ಯಾಸಿ ಹ್ಯಾಮ್ ಇವರು ಮಕ್ಕಳಿಗೆ ರೇಡಿಯೋ ತರಂಗಗಳ ವಿವಿಧತೆ, ಅವಶ್ಯಕತೆ, ಅನುಕೂಲತೆ, ಪ್ರಕ್ರಿಯೆ ನಡೆಸುವ ವಿಧಾನ, ಲೈಸೆನ್ಸ್ ಪಡೆಯುವ ಬಗ್ಗೆ ಸಂಪೂರ್ಣ ಮಾಹಿತಿಯನ್ನು ನೀಡಿದರು.

ಶ್ರೀ. ಪಿ.ಜಿ.ಆರ್.ಸಿಂಧ್ಯ, ರಾಜ್ಯ ಮುಖ್ಯ ಆಯುಕ್ತರು ಭಾಗವಹಿಸಿ ಮಕ್ಕಳಿಗೆ ಪ್ರಮಾಣ ಪತ್ರವನ್ನು ವಿತರಿಸಿ ಅವರ ಅಭಿಪ್ರಾಯಗಳೊಂದಿಗೆ ಸಂವಾದವನ್ನು ವೀಕ್ಷಿಸಿ ಅವರುಗಳಿಗೆ ಅಭಿನಂದನೆಗಳನ್ನು ಸಲ್ಲಿಸಿದರು.

ಶ್ರೀಮತಿ. ಪಿ. ಸರೋಜಾ, ಜಿಲ್ಲಾ ಮುಖ್ಯ ಆಯುಕ್ತರು, ಬೆಂಗಳೂರು ಉತ್ತರ ಜಿಲ್ಲೆ ಇವರು ಕಾರ್ಯಕ್ರಮವನ್ನು ಉದ್ಘಾಟಿಸಿ ಮಾತನಾಡಿ ಮಕ್ಕಳನ್ನು ಪ್ರೋತ್ಸಾಹಿಸಿದರು.

ಶ್ರೀಮತಿ ಬಿ.ವಿ. ರಾಮಲತಾ, ರಾಜ್ಯ ಜಂಟಿ ಕಾರ್ಯದರ್ಶಿ(ಗೈ), ಶ್ರೀ. ಎಲ್.ಟಿ. ಲೋಕೇಶ್, ಸಹ ಕಾರ್ಯದರ್ಶಿ, ಶ್ರೀಮತಿ ಮಂಜುಳ. ಸಿ, ರಾಜ್ಯ ಸಂಘಟನಾ ಆಯುಕ್ತರು(ಗೈ), ಶ್ರೀ. ಎ.ಎಂ. ಶಂಕರ್, ರಾಜ್ಯ ತರಬೇತಿ ಆಯುಕ್ತರು (ಸ್ಕೌ), ಶ್ರೀ. ಎಂ.ಎಸ್. ಸತೀಶ್, ಜಿಲ್ಲಾ ಕಾರ್ಯದರ್ಶಿ, ಬೆಂಗಳೂರು ದಕ್ಷಿಣ ಜಿಲ್ಲೆ, ಶ್ರೀ ಅನಂತ್ ಹಾಗೂ ಸ್ಕೌಟ್ಸ್-ಗೈಡ್ಸ್, ರೋವರ್ಸ್, ರೇಂಜರ್ಸ್‌ಗಳು ಭಾಗವಹಿಸಿದ್ದರು.






# ವಿಭಾಗ ಮಟ್ಟದ ಪ್ರಕೃತಿ ಅಧ್ಯಯನ ಶಿಬಿರ
## (ಶಿರಸಿ)

ಅಕ್ಟೋಬರ್ 6 ರಿಂದ 10 ರ ವರೆಗೆ ಭಾರತ್ ಸ್ಕೌಟ್ಸ್–ಗೈಡ್ಸ್, ಕರ್ನಾಟಕ, ಶಿರಸಿ ಜಿಲ್ಲಾ ಸಂಸ್ಥೆ, ಆಶ್ರಯದಲ್ಲಿ ಶಿರಸಿಯ ಗೋಳಿ ಶ್ರೀ ಸಿದ್ಧಿವಿನಾಯಕ ದೇವಸ್ಥಾನದಲ್ಲಿ ವಿಭಾಗ ಮಟ್ಟದ ಪ್ರಕೃತಿ ಅಧ್ಯಯನ ಮತ್ತು ಚಾರಣ ಶಿಬಿರವನ್ನು ಹಮ್ಮಿಕೊಳ್ಳಲಾಗಿತ್ತು. ಶಿಬಿರದ ಉದ್ಘಾಟನೆಯನ್ನು ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಎಮ್. ಎಂ. ಭಟ್ಟ ಇವರು ನೆರವೇರಿಸಿದರು. ಶಿಬಿರದ ನಾಯಕಿ ಶ್ರೀಮತಿ ಸಂಗೀತಾ, ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು ಕಾರ್ಯಕ್ರಮದಲ್ಲಿ ಉಪಸ್ಥಿತರಿದ್ದರು. ಶಿಬಿರದಲ್ಲಿ ವಿವಿಧ ಜಿಲ್ಲೆಗಳಿಂದ ಆಗಮಿಸಿದ 125 ರೋವರ್ ಹಾಗೂ 94 ರೇಂಜರ್ಸ್ ಭಾಗವಹಿಸಿದ್ದರು. ಶಿಬಿರದ ಎರಡನೇ ದಿನ ಶಿಬಿರಾರ್ಥಿಗಳಿಗೆ 20 ಕಿಲೋಮೀಟರ್‌ಗಳ ಚಾರಣವನ್ನು ಕೈಗೊಳ್ಳಲಾಗಿತ್ತು.

3ನೇ ದಿನ ಶಿಬಿರದಲ್ಲಿ ಶಿಬಿರಾರ್ಥಿಗಳಿಗೆ ಪರಿಸರ ಹಾಗೂ ಪರಿಸರ ಸಂರಕ್ಷಣೆಯ ಬಗ್ಗೆ ಕಾರ್ಯಾಗಾರವನ್ನು ಹಮ್ಮಿಕೊಳ್ಳಲಾಗಿತ್ತು. ಪರಿಸರ ಬರಹಗಾರರಾದ ಶ್ರೀ ಶಿವಾನಂದ ಕಳವೆ, ನೆಲಜಲ ಸಂರಕ್ಷಣೆಯ ಬಗ್ಗೆ ಮಾಹಿತಿಯನ್ನು ನೀಡಿದರು. ಶಿರಸಿಯ ಅರಣ್ಯ ಮಹಾವಿದ್ಯಾಲಯದ ಪ್ರಾಧ್ಯಾಪಕರಾದ ಡಾ. ವಾಸುದೇವ್ ಆರ್. ಅವರು ಜೀವ ವೈವಿಧ್ಯಗಳ ಬಗ್ಗೆ ಕಾರ್ಯಾಗಾರವನ್ನು ನಡೆಸಿದರು. ಶಿರಸಿಯ ಮಹಾಲಕ್ಷ್ಮಿ ಮೆಮೋರಿಯಲ್ ಆಸ್ಪತ್ರೆಯ ಮುಖ್ಯಸ್ಥರಾದ ಡಾ. ಸುಮನ್ ಹೆಗಡೆ ತಾವು ಕೈಗೊಂಡಿದ್ದ ಮಾನಸ ಸರೋವರ ಯಾತ್ರೆ ಹಾಗೂ ಅದರ ತಯಾರಿಯ ಬಗ್ಗೆ ಶಿಬಿರಾರ್ಥಿಗಳಿಗೆ ಮಾಹಿತಿಯನ್ನು ನೀಡಿದರು. ಪ್ರಜಾವಾಣಿ ಪತ್ರಿಕೆಯ ವರದಿಗಾರರಾದ ಶ್ರೀಮತಿ ಸಂಧ್ಯಾ ಹೆಗಡೆ ಪತ್ರಿಕೋದ್ಯಮ ಹಾಗೂ ಪರಿಸರದ ನಡುವಿನ ಸಂಬಂಧಗಳ ಬಗ್ಗೆ ಕಾರ್ಯಾಗಾರವನ್ನು ನಡೆಸಿದರು.



ಶಿಬಿರದ 4ನೇ ದಿನದಂದು ಶಿಬಿರಾರ್ಥಿಗಳಿಗೆ ಶಿರಸಿಯ ಸುತ್ತಮುತ್ತಲಿನ ಪ್ರಸಿದ್ಧ ಸ್ಥಳಗಳಿಗೆ ಚಾರಣವನ್ನು ಹಮ್ಮಿಕೊಳ್ಳಲಾಗಿತ್ತು. ಒಟ್ಟು 6 ಬಸ್ಸುಗಳಲ್ಲಿ ಹೊರಟ ಶಿಬಿರಾರ್ಥಿಗಳನ್ನು ಯಾಣ, ಮಂಜುಗುಣಿ ಹಾಗೂ ಶಿರಸಿಯ ಸುಪ್ರಸಿದ್ಧ ಶ್ರೀ ಮಾರಿಕಾಂಬಾ ದೇವಾಲಯ ಹಾಗೂ ಇನ್ನಿತರ ಪ್ರೇಕ್ಷಣೀಯ ಸ್ಥಳಗಳಿಗೆ ಕರೆದೊಯ್ಯಲಾಯಿತು. ನಂತರ ದೇವನಳ್ಳಿಯಿಂದ ಯಾಣದವರೆಗೆ ಕಠಿಣವಾದ ದಾರಿಯಲ್ಲಿ ಒಟ್ಟು 12 ಕಿ.ಮೀ.ನ ಚಾರಣವನ್ನು ಕೈಗೊಳ್ಳಲಾಯಿತು. ಯಾಣದ ಏಕಶಿಲಾ ಬೆಟ್ಟದೊಳಗಿರುವ ಗುಹೆಯನ್ನು ಪ್ರವೇಶಿಸಿ ಪ್ರಕೃತಿಯ ವಿಸ್ಮಯ ಹಾಗೂ ಅದರ ಇತಿಹಾಸದ ಬಗ್ಗೆ ತಿಳಿದುಕೊಂಡರು. ಮಂಜುಗುಣಿಯಲ್ಲಿ ಶಿಬಿರಾರ್ಥಿಗಳು ಶ್ರೀ ಮಂಜುನಾಥೇಶ್ವರನ ದೇವಸ್ಥಾನಕ್ಕೆ ತೆರಳಿ ದೇವರ ದರ್ಶನವನ್ನು ಪಡೆದು ಮಂಜುಗುಣಿಯ ಇತಿಹಾಸ ಪ್ರಸಿದ್ಧ ಕೆರೆಯನ್ನು ವೀಕ್ಷಿಸಿದರು. ಸ್ವಚ್ಛತಾ ಕಾರ್ಯಕ್ರಮವನ್ನು ಕೈಗೊಂಡರು. ಅಲ್ಲಿಂದ ಹೊರಟ ಶಿಬಿರಾರ್ಥಿಗಳು ದಕ್ಷಿಣ ಭಾರತದ ಸುಪ್ರಸಿದ್ಧ ಶ್ರೀ ಮಾರಿಕಾಂಬಾ ದೇವಸ್ಥಾನಕ್ಕೆ ತೆರಳಿ ಶ್ರೀ ಮಾರಿಕಾಂಬೆಯ ದರ್ಶನ ಪಡೆದರು.

ಕೊನೆಯ ದಿನದಂದು ಮುಂಜಾನೆ 6 ಗಂಟೆಗೆ ಸರ್ವಧರ್ಮ ಪ್ರಾರ್ಥನೆಯನ್ನು ಮಾಡಲಾಯಿತು. ಉಪಾಹಾರವನ್ನು ಸೇವಿಸಿದ ನಂತರ ಗೋಳಿಯ ಶ್ರೀ ಸಿದ್ಧಿವಿನಾಯಕ ದೇವಸ್ಥಾನ ಹಾಗೂ ಸುತ್ತಮುತ್ತಲಿನ ಪರಿಸರವನ್ನು ಸ್ವಚ್ಛಗೊಳಿಸಲಾಯಿತು. 10 ಗಂಟೆಗೆ ಸಮಾರೋಪ ಸಮಾರಂಭವನ್ನು ಏರ್ಪಡಿಸಲಾಯಿತು. ಈ ಸಮಾರೋಪ ಸಮಾರಂಭದ ಅಧ್ಯಕ್ಷತೆಯನ್ನು ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಎಮ್.ಎಮ್. ಭಟ್ಟ ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಶ್ರೀ ಸದಾನಂದ ಸ್ವಾಮಿ ಸಿ. ಕ್ಷೇತ್ರ ಶಿಕ್ಷಣಾಧಿಕಾರಿಗಳು ಶಿರಸಿ, ಶ್ರೀ ವಿ. ಆರ್. ಭಟ್ಟ, ಅಧ್ಯಕ್ಷರು, ಶ್ರೀ ಸಿದ್ಧಿವಿನಾಯಕ ದೇವಸ್ಥಾನ ಗೋಳಿ ಭಾಗವಹಿಸಿದ್ದರು. ಜಿಲ್ಲಾ ಪದಾಧಿಕಾರಿಗಳು ಉಪಸ್ಥಿತರಿದ್ದರು.

# ವಿಭಾಗ ಮಟ್ಟದ ಪ್ರಕೃತಿ ಅಧ್ಯಯನ ಶಿಬಿರ
## (ಬಳ್ಳಾರಿ)

ಸೆಪ್ಟೆಂಬರ್ 28 ರಿಂದ ಅಕ್ಟೋಬರ್ 2 ರ ವರೆಗೆ ಭಾರತ್ ಸ್ಕೌಟ್ಸ್-ಗೈಡ್ಸ್ ಕರ್ನಾಟಕ, ಜಿಲ್ಲಾ ಸಂಸ್ಥೆ ಬಳ್ಳಾರಿ ಮತ್ತು ಶ್ರೀ ನಾಜಿಂ ಶೇಕ್, ಮ್ಯಾನೇಜಿಂಗ್ ಡೈರೆಕ್ಟರ್, ಸ್ಮಯೋರ್ ಸಂಸ್ಥೆ, ದೇವಗಿರಿ, ಸಂಡೂರು ತಾಲ್ಲೂಕು, ಬಳ್ಳಾರಿ ಜಿಲ್ಲೆ. ಇವರ ಸಂಯುಕ್ತಾಶ್ರಯದಲ್ಲಿ ಕಲಬುರಗಿ ವಿಭಾಗ ಮಟ್ಟದ ರೋವರ್ಸ್-ರೇಂಜರ್ಸ್‌ಗಳ ಚಾರಣ ಮತ್ತು ಪ್ರಕೃತಿ ಅಧ್ಯಯನ ಶಿಬಿರ ನಡೆಯಿತು.



ಸೆಪ್ಟೆಂಬರ್ 28 ರಂದು ನಡೆದ ಶಿಬಿರದ ಉದ್ಘಾಟನೆಯ ಅಧ್ಯಕ್ಷತೆಯನ್ನು ಶ್ರೀ ಇ. ತುಕಾರಾಂ, ಶಾಸಕರು, ಸಂಡೂರು ಕ್ಷೇತ್ರ, ಇವರು ವಹಿಸಿದ್ದರು. ಉದ್ಘಾಟನೆಯನ್ನು ಶ್ರೀ ಶಿವರಾವ್ ಘೋರ್ಪಡೆ, ಛೇರ್ಮನ್ ಸ್ಮಯೋರ್, ಶ್ರೀಮತಿ ಯಶೋಧರ್ ಘೋರ್ಪಡೆ ಇವರು ನೆರವೇರಿಸಿದರು. ಡಾ॥ ವಿ. ರಾಮ್ ಪ್ರಸಾತ್ ಮನೋಹರ್, ಜಿಲ್ಲಾಧಿಕಾರಿಗಳು ಹಾಗೂ ಮಹಾ ಪೋಷಕರು ಭಾರತ್ ಸ್ಕೌಟ್ಸ್-ಗೈಡ್ಸ್ ಬಳ್ಳಾರಿ. ಕಿರುಹೊತ್ತಗೆ ಬಿಡುಗಡೆ ಮಾಡಿದರು. ಅಡಿಷನಲ್ ಎಸ್.ಪಿ. ಶ್ರೀ ಜಗದೀಶ್ ಉಪಸ್ಥಿತರಿದ್ದರು. ಮುಖ್ಯ ಅತಿಥಿಗಳಾಗಿ ಶ್ರೀ ಪಿ.ಜಿ.ಆರ್. ಸಿಂಧ್ಯಾ, ರಾಜ್ಯ ಪ್ರಧಾನ ಆಯುಕ್ತರು, ಶ್ರೀ ಮಹಮ್ಮದ್ ಅಬ್ದುಲ್ ಸಲೀಂ, ಉಪಾಧ್ಯಕ್ಷರು, ಸ್ಮಯೇರ್ ಮೈನ್ಸ್, ಶ್ರೀ ಹೆಚ್ ಯಲ್ಲಪ್ಪ, ಜನರಲ್ ಮ್ಯಾನೇಜರ್, ಸ್ಮಯೇರ್ ಮೈನ್ಸ್ ಶ್ರೀಮತಿ ಡಾ॥ ನಜೀಮಾ ಬಾನು ರವರುಗಳು ಆಗಮಿಸಿದ್ದರು. ಕಾರ್ಯಕ್ರಮವನ್ನು ಉದ್ಘಾಟಿಸಿದ ಶ್ರೀ ಶಿವರಾಜ್ ಘೋರ್ಪಡೆ, ತಮ್ಮ ಭಾಷಣದಲ್ಲಿ ಸ್ಕೌಟ್ಸ್-ಗೈಡ್ಸ್ ಸಂಸ್ಥೆಯ ಶಿಸ್ತು, ಸಮಯಪಾಲನೆ, ಒಗ್ಗಟ್ಟಿನ ಜೀವನ, ದೇಶ ಸೇವೆಯ ಬಗ್ಗೆ ಮಾತನಾಡಿದರು. 1975ರಲ್ಲಿ ರಾಜ್ಯಮಟ್ಟದ ಸ್ಕೌಟ್ಸ್-ಗೈಡ್ಸ್ ಜಾಂಬೂರಿ ಸಂಡೂರಿನಲ್ಲಿ ನಡೆದ ಸವಿನೆನಪುಗಳನ್ನು ವಿವರಿಸಿದರು.

ಶ್ರೀ ವಿಜಯಸಿಂಹ, ಜಿಲ್ಲಾ ಕಾರ್ಯದರ್ಶಿಗಳು, ಪ್ರಾಸ್ತಾವಿಕ ಭಾಷಣ ಮಾಡಿದರು. ಶ್ರೀ ರಾಮ್ ಪ್ರಸಾತ್ ಮನೋಹರ್, ಜಿಲ್ಲಾಧಿಕಾರಿಗಳು, ತಾವು ಸಹ ಪ್ರಾಥಮಿಕ ಶಾಲೆಯಲ್ಲಿ ಸ್ಕೌಟ್ ವಿದ್ಯಾರ್ಥಿಯಾಗಿದ್ದ ದಿನಗಳನ್ನು ನೆನಪಿಸಿಕೊಂಡು ಅದರ ಅನುಭವಗಳನ್ನು ಹಂಚಿಕೊಂಡರು. ಜಿಲ್ಲಾ ಸಂಸ್ಥೆಯ ತರಬೇತಿ ಕೇಂದ್ರಕ್ಕೆ ಬೇಕಾಗುವ ಸ್ಥಳವನ್ನು ಹಾಗೂ ಕಬ್-ಬುಲ್‌ಬುಲ್‌ಗಳಿಗೆ ಸಮವಸ್ತ್ರಗಳನ್ನು ನೀಡುವುದಾಗಿ ಭರವಸೆಯನ್ನು ನೀಡಿದರು. ರೋವರ್ಸ್-ರೇಂಜರ್ಸ್‌ಗಳ ಜೊತೆ ಹೆಚ್ಚು ವಿಷಯಗಳನ್ನು ಹಂಚಿಕೊಂಡರು. ಈ ಬಾರಿ ಹಂಪಿ ಉತ್ಸವದಲ್ಲಿ ಸ್ಕೌಟ್ಸ್-ಗೈಡ್ಸ್, ರೋವರ್ಸ್-ರೇಂಜರ್‌ಗಳಿಗೆ ಸೇವೆ ಮಾಡಲು ಅನುಕೂಲ ಮಾಡಿಕೊಡುವುದಾಗಿ ತಿಳಿಸಿದರು.

ಮುಖ್ಯ ಅತಿಥಿಗಳಾಗಿ ಆಗಮಿಸಿದ ರಾಜ್ಯ ಪ್ರಧಾನ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯಾ ರವರು ತಮ್ಮ ಭಾಷಣದಲ್ಲಿ ದೇಶಪ್ರೇಮ, ಪ್ರಾಣಿ ದಯೆ, ಸ್ವಾವಲಂಬನೆ ಮತ್ತು ವ್ಯಕ್ತಿತ್ವ ವಿಕಸನ ಈ ಎಲ್ಲವನ್ನು ಈ ಸಂಸ್ಥೆಯಿಂದ ಪಡೆಯಬಹುದೆಂದು ಹೇಳಿದರು. ಸ್ಕೌಟ್-ಗೈಡ್‌ಗಳು ಕರ್ನಾಟಕ ದರ್ಶನ ಮತ್ತು ನಿಪುಣ್ ತರಬೇತಿ ಮುಗಿಸಿದವರು

ಭಾರತ ದರ್ಶನ ಕಾರ್ಯಕ್ರಮದಲ್ಲಿ ಭಾಗವಹಿಸಬಹುದು ಎಂದು ತಿಳಿಸಿದರು. ಸ್ಮಯೇರ್ ಸಂಸ್ಥೆಯ ಕೊಡುಗೆಯನ್ನು ಶ್ಲಾಘಿಸಿದರು.

ಶ್ರೀ ಮೊಹಮ್ಮದ್ ಅಬ್ದುಲ್ ಸಲೀಮ್, ಉಪಾಧ್ಯಕ್ಷರು ಸ್ಮಯೇರ್ ಇವರು ವಿಭಾಗ ಮಟ್ಟದ ಈ ಶಿಬಿರ ನಡೆಯುತ್ತಿರುವುದು ನಮಗೆ ತುಂಬಾ ಸಂತೋಷವಾಗಿದೆ. ಸೇವಾ ಮನೋಭಾವನೆ, ಶಿಸ್ತು, ಸಮಯ ಪಾಲನೆ, ಗುರು ಹಿರಿಯರಲ್ಲಿ ಭಕ್ತಿ ದೇಶಪ್ರೇಮಗಳನ್ನು ಗುಣಗಳನ್ನು ಸ್ಕೌಟ್ಸ್-ಗೈಡ್ಸ್ ಸಂಸ್ಥೆ ಬೆಳೆಸುತ್ತದೆ ಎಂದು ತಿಳಿಸಿದರು.

ಡಾ॥ ನಜೀಮ್ ಬಾನು ರವರುಪ್ರಕೃತಿಯಲ್ಲಿ ದೊರೆಯುವ ಔಷಧಿ ಗುಣವುಳ್ಳ ಸಸ್ಯಗಳು, ಹೂವುಗಳು, ಅವುಗಳಿಂದಾಗುವ ಉಪಯೋಗಗಳ ಮಾಹಿತಿಯನ್ನು ನೀಡಿದರು. ಶ್ರೀ ಎಸ್. ಸೋಮಪ್ಪ, ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿಗಳು ಸ್ವಾಗತ ಕೋರಿದರು. ಶ್ರೀಮತಿ ಜೆ. ಮಲ್ಲೇಶ್ವರಿ ಜೂಜಾರೆ, ರಾಜ್ಯ ಸಹಾಯಕ ಸಂಘಟನಾ ಆಯುಕ್ತರು (ಗೈಡ್) ನಿರೂಪಣೆ ಮಾಡಿದರು. ಶ್ರೀ ಎಂ. ನಾಗರಾಜ್, ಜಿಲ್ಲಾ ಸಂಘಟನಾ ಆಯುಕ್ತರು ವಂದನಾರ್ಪಣೆ ಗೈದರು. ಶಿಬಿರದಲ್ಲಿ ವಿವಿಧ ಜಿಲ್ಲೆಗಳಿಂದ 61 ರೇಂಜರ್ಸ್, 172 ರೋವರ್ಸ್, 14 ಸಿಬ್ಬಂದಿ ವರ್ಗದವರು ಭಾಗವಹಿಸಿದ್ದರು.

ಸೆಪ್ಟೆಂಬರ್ 30 ರಂದು ವಲಯ ಅರಣ್ಯ ಅಧಿಕಾರಿಯವರಾದ ಶ್ರೀ ಶಶಿಧರ ಇವರು ರೋವರ್ಸ್-ರೇಂಜರ್ಸ್ ಗಳಿಗೆ ಔಷಧಿಯ ಸಸ್ಯಗಳ ಬಗ್ಗೆ ಹಾಗೂ ಅರಣ್ಯದಲ್ಲಿ ಸಿಗುವ ಇತರ ಉತ್ಪನ್ನಗಳ ಸಂಪೂರ್ಣ ಮಾಹಿತಿಯನ್ನು ನಿಡಿದರು.

ಅಕ್ಟೋಬರ್ 2 ರಂದು ಸರ್ವಧರ್ಮ ಪ್ರಾರ್ಥನೆ, ಮಹಾತ್ಮಾ ಗಾಂಧೀಜಿ ಹಾಗೂ ಲಾಲ್‌ಬಹದ್ದೂರ್ ಶಾಸ್ತ್ರೀಜಿಯವರ ಜನ್ಮ ದಿನಾಚರಣೆ ಹಾಗೂ ಸ್ವಚ್ಛ ಭಾರತ ಕಾರ್ಯಕ್ರಮ ಹಮ್ಮಿಕೊಳ್ಳಲಾಗಿತ್ತು. ಸ್ವಚ್ಛತಾ ಕಾರ್ಯಕ್ರಮದ ಚಾಲನೆಯನ್ನು ಶ್ರೀ ಮೊಹಮ್ಮದ್ ಅಬ್ದುಲ್ ಸಲೀಂ ರವರು ನೆರವೇರಿಸಿದರು. ಬೆಳಿಗ್ಗೆ 11.30ಕ್ಕೆ ಸಮಾರೋಪ ಸಮಾರಂಭ ನಡೆಸಲಾಯಿತು. ಶ್ರೀ ವಿಜಯಸಿಂಹ ಅಧ್ಯಕ್ಷತೆ ವಹಿಸಿದ್ದರು. ಮುಖ್ಯ ಅತಿಥಿಗಳಾಗಿ, ಡಾ॥ ಧನುಜರಾಣಿ, ಜಿಲ್ಲಾ ಆಯುಕ್ತರು, ಗೈಡ್ ವಿಭಾಗ ಹಾಗೂ ಡಾ॥ ವಿದ್ಯಾ, ಜಿಲ್ಲಾ ಸಹಾಯಕ ಆಯುಕ್ತರು, ಜಿಲ್ಲಾ ಖಜಾಂಚಿಗಳಾದ ಶ್ರೀ ವಿ. ಪ್ರಭಾಕರ್, ಸ್ಮಯೇರ್ ಸಂಸ್ಥೆಯ ಉಪಾಧ್ಯಕ್ಷರಾದ ಶ್ರೀ ಮಹಮ್ಮದ್ ಅಬ್ದುಲ್ ಸಲೀಂ, ಡಾ॥ ನಜೀಮಾ ಬಾನು, ಹಾಗೂ ಸ್ಮಯೇರ್ ಪ್ರೌಢಶಾಲೆಯ ಮುಖ್ಯ ಗುರುಗಳಾದ ಶ್ರೀ ಹೆಚ್.ಎಂ. ಹನುಮಂತಪ್ಪ ನವರು ಉಪಸ್ಥಿತರಿದ್ದರು.

ರೋವರ್ ವಿಭಾಗದ ನಾಯಕರಾಗಿ ಶ್ರೀ ಹೆಚ್. ಮಲ್ಲಾಪುರ ಹಾಗೂ ರೇಂಜರ್ಸ್ ವಿಭಾಗದ ನಾಯಕಿಯಾಗಿ ಶ್ರೀಮತಿ ಅನ್ನಪೂರ್ಣರವರು ಕಾರ್ಯ ನಿರ್ವಹಿಸಿದರು.



# The Sandur Manganese & Iron Ores Limited

(An ISO 9001:2015; ISO 14001:2015 and OHSAS 18001:2007 certified Company)
Registered Office : 'Satyalaya', Door No. 266 (Old No. 80), Behind Taluka Office
Ward No. 1, Palace Road, Sandur - 583 119, Ballari District, Karnataka, CIN: L85110KA 1954 PLC000759
Website: www.sandurgroup.com, Telephone: +91 8395 260301 Fax: +91 8395260473






**CORPORATE OFFICE**
No. 1A & 2C, 'Redifice Signature'
No. 6, Hospital Road, Shivajinagar
Bangalore - 560 001, Karnataka
Tel: 080-4152 0176-80 (Ext. 121)
Fax: 080-4152 01768
Email: ghorpadesy@durgroup.com


**28 Sep 2018**

## MESSAGE

The Sandur Manganese & Iron Ores is happy to host this Jamboree for some 300 Rovers & Rangers at the Divisional level organized by the Bharat Scouts & Guides, Karnataka. A similar camp was held at Sandur way back in 1975, some 43 years ago, when both Shri Y.R. Ghorpade and Shri M.Y Ghorpade, founders of our Company witnessed the events. Today we welcome repetition of history.

It was Baden-Powell, a renowned British Army Officer, who initiated the idea that young boys and girls should learn basic skills that would be useful in daily life. Basically, to explore nature and the surroundings so that physical, mental and spiritual development takes place among the youth. This started the Boys Scouts and Girl Guides movement for older children. Soon the 'Wolf Cubs' and 'Bulbuls' movement for younger brothers and sisters took shape, inspired by Rudyard Kipling's "jungle Book". These movements became worldwide particularly in the UK, South Africa, America, Canada, France and Australia. Asian countries like India, under the British influence, also adopted the movement in some measure. As early as 1909, the first Boys Scout Unit was formally started at Bishop Cottons Boys' School in Bangalore, coincidentally, where I was the Captain of School and finished my secondary education in 1957. I was fortunate in benefiting from the Cubs and Scouts activities during schooling.

The motto *"Be Prepared"* is the readiness to face challenges, help others, and do one's duty. Scouting is all about teamwork, adventure and friendship. Lord Baden-Powell emphasized four aims of Scouting and Guiding. Firstly, formation of character; secondly formation of healthy habits; thirdly, training in handicraft and acquiring useful skills; and



fourthly, cultivating lasting spirit of service. Pursuit of these aims would make the youth develop into good citizen in adult life and serve the community well.

Well-trained scouts and guides can contribute their mite to social change. Adult Rovers and Rangers can spread general awareness in the fields of conservation of energy and natural resources such as electricity, fuel, and water. Today, environmental protection has become a major issue in the light of global warming. To mitigate these concerns, tree planting assumes great importance and avoidance of pollution by way of green-house gases and solid waste disposal. Use of non-degradable plastics must be minimized, if not totally banned. Even otherwise, littering must be discouraged when people gather in large numbers. I have seen picturesque hill stations in shambles caused by unruly and unconcerned picnickers and tourists. Jamboree or camps of Scouts and Guides, is a case in point. I am sure your Scout Masters and leaders have made you fully aware of the good social responsibilities and the art of living outdoor. The high standards you set now can signal a strong message all round.

The mining business, too, is required to comply with the Re clamation and Rehabilitation (R&R) Plan, Greening of waste dumps and steep embankments is undertaken to avoid soil erosion. Systematic drainages are also provided to optimize water harvesting and strengthen the ground water resource. These measures promote Supplementary Environment Management Plan during the lease period. Manufacturing industries are also governed by the pollution control measures to minimize emission of green-house gases and suspended particulate matter. SMIORE's concern for the environment is clearly visible at Deogiri.

Thus, protection of the environment is everybody's concern. The earlier we realize it the better it is for the country and the world at large. Even wildfires in one country can affect a neighboring country by the fallout of fly ash. It can be suffocating for want of fresh air. Younger Scouts and Guides can also educate the public about such hazards, usually man made. Understand, older Rovers and Rangers take up such leadership work about how best to protect the forests. Some of you may wish to make a career of environment protection a noble cause indeed in the service of humanity and nature.

I wish to convey my best wishes to all the organizers, Rovers and Rangers for the successful conduct of this Jamboree and hope you will carry good memories of your camping experience at Deogiri, Sandur, bringing survival skills to the fore in times to come. Good luck to you all and happy camping

**S.Y. GHORPADE**

Chairman.




## ಬಳ್ಳಾರಿ

ಆಗಸ್ಟ್ 30 ರಂದು ಸಿರುಗುಪ್ಪ ತಾಲೂಕಿನಲ್ಲಿ ಕೇರಳ ಹಾಗೂ ಕೊಡಗು ಜಿಲ್ಲೆಯ ನೆರೆಸಂತ್ರಸ್ತರಿಗೆ ಪರಿಹಾರ ನಿಧಿ ಸಂಗ್ರಹ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಯಿತು. ಶ್ರೀ ಯೋಗಾನಂದಯ್ಯ, ಬಿ.ಆರ್.ಪಿ ಮತ್ತು ಶ್ರೀ ಜಗದೀಶ್ ಕೋರಿ ಸಿ.ಆರ್.ಪಿ. ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿ ಶ್ರೀ ನಟರಾಜ್, ಖಜಾಂಚಿ ಶ್ರೀ ಜಿ. ಯೋಗೀಶ್, ಸ್ಕೌಟ್ ಶಿಕ್ಷಕರಾದ ಶ್ರೀ ಶರಣಪ್ಪ, ಹೆಚ್.ಎಂ. ಶಿವಪ್ರಕಾಶ್, ರಾಘವೇಂದ್ರ ಕರ್ಚಿಗನೂರು, ಭಾಗವಹಿಸಿದ್ದರು. ಒಟ್ಟು 13,000 ರೂಗಳನ್ನು ಸಂಗ್ರಹಿಸಲಾಯಿತು ಈ ಹಣವನ್ನು ಜಿಲ್ಲಾ ಸಂಸ್ಥೆಯ ಮೂಲಕ ಜಿಲ್ಲಾಧಿಕಾರಿಗಳಿಗೆ ಚೆಕ್ ಮುಖಾಂತರ ಕೊಡಲಾಯಿತು.

## Bengaluru South

Bangalore South District Conducted the 19th Unit Leaders's Conference at Goa from 12th to 16th at Nirmala Nature Camp Goa. 65 Unit Leaders participated in the Conference. Sri JamesFernades, SEC of Goa District Inaugurated the Conference. Sri M.S. Sateesh, Dist SEC, Bangalore South welcomed the gathering. Annual plan was done at the conference. Updates of SHQ & NHQ were given to the Unit Leaders.



Sri Ananth. B.S. Asst. SEC, Bangalore South Co-ordinated the event. Sri P. Palani, D.C.(S) and Sri Muniyappa H.Q. Commissioner of the District were present in the Conference. Sri P. Palani Addressed the Conference and Shared his experience in Scouting. Sri Muniyappa was Guest for the Grand Camp fire. He appriciated the efforts of the participants. in Preparing for the Camp fire.

* Scout Troop was Inaugurated at BGMS Shishunja Vidyalaya, Rameshnagar, Marath halli, by Sri P. Nandakumar, RSL, HAL Rover Crew by Lighting the Lamp.

Smt. Prasanna, Board Member, Mrs. Shrimathi. Principal, Smt. Prema, Vice Principal Sri Venkatesh, Admin Manager, Bro. Mallikarjuna, Bro.D. Shivappa were present. Sri Sripad, Sri Bhim Shankar, Scout Master Co-ordinated the Programme



ಸೆಪ್ಟೆಂಬರ್ 12 ರಂದು ಭಾರತ್ ಸ್ಕೌಟ್ಸ್-ಗೈಡ್ಸ್, ಕರ್ನಾಟಕ ಜಿಲ್ಲಾ ಸಂಸ್ಥೆ ಬೆಳಗಾವಿ ಇವರ ವತಿಯಿಂದ ಎಂ.ವಿ. ಹೆರವಾಡಕರ ಶಾಲೆ ಬೆಳಗಾವಿ ನಗರ ವಲಯ ಇಲ್ಲಿ ಜಿಲ್ಲಾ ಮಟ್ಟದ ಗೀತೆಗಳ "ಗೀತಗಾಯನ" ಸ್ಪರ್ಧೆಯನ್ನು ಆಯೋಜಿಸಲಾಗಿತ್ತು. ಸಮಾರಂಭದಲ್ಲಿ ಭಾಗಿಯಾದ ಜಿಲ್ಲಾ ಆಯುಕ್ತರಾದ ಶ್ರೀಮತಿ ಪಿ.ಬಿ. ಪಾಟೀಲ ಇವರು ಕಾರ್ಯಕ್ರಮದ ಧ್ಯೇಯೋದ್ಧೇಶಗಳ ಕುರಿತು ಪ್ರಾಸ್ತಾವಿಕವಾಗಿ ಮಾತನಾಡಿದರು.

ನಂತರ ಶ್ರೀ ಎಂ.ಎಸ್. ಪ್ರಸನ್ನಕುಮಾರ್, ಕಾರ್ಯದರ್ಶಿಗಳು, ಕ.ಪ್ರೌ.ಶಿ.ಪ. ಮಂಡಳಿ ಹಾಗೂ ಪದನಿಮಿತ್ತ ಸಹನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಳಗಾವಿ ವಿಭಾಗ, ಇವರು ಹಾಗೂ ವೇದಿಕೆ ಮೇಲೆ ಇದ್ದ ಎಲ್ಲ ಗಣ್ಯಮಾನ್ಯರು ದೀಪ ಬೆಳಗಿಸುವುದರ ಮೂಲಕ ಕಾರ್ಯಕ್ರಮವನ್ನು ಉದ್ಘಾಟಿಸಿದರು. ಉದ್ಘಾಟನಾ ಭಾಷಣ ಮಾಡಿದ ಶ್ರೀ ಎಂ.ಎಸ್. ಪ್ರಸನ್ನಕುಮಾರ್ ರವರು ಈ ಕಾರ್ಯಕ್ರಮ ಸಂಘಟಿಸಿದಕ್ಕೆ ಹರ್ಷ ವ್ಯಕ್ತಪಡಿಸಿ ಎಲ್ಲರಲ್ಲಿಯೂ ರಾಷ್ಟ್ರಾಭಿಮಾನ ಬೆಳೆಸುವ ಈ ಪ್ರಯತ್ನಕ್ಕೆ ಸಂಸ್ಥೆಯನ್ನು ಅಭಿನಂದಿಸಿದರು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ಶ್ರೀ ಗಜಾನನ ಮನ್ನಿಕೇರಿ, ಜಿಲ್ಲಾ ಮುಖ್ಯ ಆಯುಕ್ತರು ಭಾ.ಸ್ಕೌ.-ಗೈ. ಜಿಲ್ಲಾ ಸಂಸ್ಥೆ. ಬೆಳಗಾವಿ ಹಾಗೂ ಪ್ರಾಂಶುಪಾಲರು/ಉಪ ನಿರ್ದೇಶಕರು (ಅ) ಜಿಲ್ಲಾ ತರಬೇತಿ ಮತ್ತು ಶಿಕ್ಷಣ ಸಂಸ್ಥೆ ಬೆಳಗಾವಿ ಇವರು ವಹಿಸಿದ್ದರು.

ಮುಖ್ಯ ಅತಿಥಿಗಳಾಗಿ ಶ್ರೀ ಎ.ಬಿ. ಪುಂಡಲೀಕ, ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ ಬೆಳಗಾವಿ(ದ) ಶ್ರೀ ಎಂ.ಜಿ. ದಾಸರ, ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಶೈಕ್ಷಣಿಕ ಜಿಲ್ಲೆ, ಚಿಕ್ಕೋಡಿ, ಶ್ರೀ ಕೃಷ್ಣ ಪ್ರಭು, ಆಡಳಿತ ಮಂಡಳಿ ಸದಸ್ಯರು, ಶ್ರೀ ಎಂ.ವಿ. ಹೆರವಾಡಕರ ಶಾಲೆ, ಬೆಳಗಾವಿ. ಶ್ರೀ ಚಿಟ್ನೀಸ್, ಆಡಳಿತ ಮಂಡಳಿ ಸದಸ್ಯರು, ಶ್ರೀ ಎಂ.ವಿ. ಹೆರವಾಡಕರ ಶಾಲೆ, ಬೆಳಗಾವಿ, ಆಗಮಿಸಿದ್ದರು. ಅತಿಥಿಗಳಾಗಿ ಶ್ರೀ ಕೆ.ಡಿ. ಬಡಿಗೇರ, ಕ್ಷೇತ್ರ ಶಿಕ್ಷಣಾಧಿಕಾರಿಗಳು ಬೆಳಗಾವಿ ನಗರ ವಲಯ. ಶ್ರೀ ಎಂ.ಎಸ್. ದಂಡಿನ, ಜಿಲ್ಲಾ ಆಯುಕ್ತರು (ಸ್ಕೌ) ಶ್ರೀಮತಿ ವೃಂದಾ ಜಿನರಾಳ, ಪ್ರಾಚಾರ್ಯರು ಎಂ.ವಿ. ಹೆರವಾಡಕರ ಶಾಲೆ ಬೆಳಗಾವಿ ಹಾಗೂ ಜಿಲ್ಲಾ ಮತ್ತು ಸ್ಥಳೀಯ ಸಂಸ್ಥೆಯ ಎಲ್ಲ ಪದಾಧಿಕಾರಿಗಳು ಉಪಸ್ಥಿತರಿದ್ದರು. ಸದರಿ ಗೀತಗಾಯನ ಸ್ಪರ್ಧೆಯಲ್ಲಿ ಬೆಳಗಾವಿ ಜಿಲ್ಲೆಯ 15 ಸ್ಥಳೀಯ ಸಂಸ್ಥೆಗಳಿಂದ 15 ತಂಡಗಳು ಭಾಗವಹಿಸಿದ್ದವು. ಇವುಗಳಲ್ಲಿ ಬೆಳಗಾವಿ ನಗರ ಸ್ಥಳೀಯ ಸಂಸ್ಥೆಯ ತಂಡ ಪ್ರಥಮ ಸ್ಥಾನ ಪಡೆದರೆ, ನಿಪ್ಪಾಣಿ ಸ್ಥಳೀಯ ಸಂಸ್ಥೆಯು ದ್ವಿತೀಯ ಸ್ಥಾನ ಹಾಗೂ ಖಾನಾಪುರ ಮತ್ತು ಸವದತ್ತಿ ಸ್ಥಳೀಯ ಸಂಸ್ಥೆಗಳು ತೃತೀಯ ಸ್ಥಾನ ಪಡೆದವು. ಭಾಗವಹಿಸಿದ ಎಲ್ಲ ಮಕ್ಕಳಿಗೆ ಪ್ರಶಸ್ತಿ ಪತ್ರಗಳನ್ನು ನೀಡಲಾಯಿತು.

* ಮಹಾತ್ಮಾ ಗಾಂಧೀಜಿಯವರ 150ನೇ ಮತ್ತು ಲಾಲ್‌ಬಹದ್ದೂರ ಶಾಸ್ತ್ರಿ ಅವರ 155ನೇ ಹುಟ್ಟುಹಬ್ಬದ ಪ್ರಯುಕ್ತ ಕೆ.ಎಲ್.ಇ. ಮಹಾದೇವಪ್ಪಣ್ಣಾ ಮುನವಳ್ಳಿ ಶಾಲೆಯಲ್ಲಿ ಸರ್ವಧರ್ಮ ಪ್ರಾರ್ಥನೆಯನ್ನು ಹಮ್ಮಿಕೊಳ್ಳಲಾಗಿತ್ತು. ನಂತರ ಶಾಲಾ ಆವರಣದಲ್ಲಿ ಸ್ವಚ್ಛತಾ ಕಾರ್ಯಕ್ರಮವನ್ನು ಮಾಡಲಾಯಿತು. ಈ ಸಂದರ್ಭದಲ್ಲಿ ಶಾಲೆಯ ಪ್ರಾಂಶುಪಾಲರಾದ ಶ್ರೀಮತಿ ಅನುಪಾ ಕೌಶಿಕ್, ಸ್ಕೌಟ್ ಮಾಸ್ಟರ್ ಶ್ರೀ ಪಿ.ವೈ. ಪಾಟೀಲ್, ಗೈಡ್ ಕ್ಯಾಪ್ಟನ್ ಶ್ರೀಮತಿ ಸುಜಾತಾ ತೊಂಡಿಕಟ್ಟಿ, ಕಬ್ ಮಾಸ್ಟರ್ ಶ್ರೀಮತಿ ಚೇತನ ಪಾಟೀಲ್ ಮತ್ತು ರೇಣುಕಾ ಪಾಟೀಲ ಪ್ಲಾಕ್ ಲೀಡರ್, ಶ್ರೀಮತಿ ನಂದಾದೀಪಾ ಶಿರಾಳಕರ ಮತ್ತು ಅಂಬಿಕಾ ಕಮ್ಮಾರ ಹಾಗೂ ಶಾಲಾ ಮಕ್ಕಳು ಉಪಸ್ಥಿತರಿದ್ದರು.



* ಕೆ.ಎಲ್.ಇ. ಮಹಾದೇವಪ್ಪಣ್ಣಾ ಮುನವಳ್ಳಿ ಶಾಲೆಯ ಸ್ಕೌಟ್ಸ್-ಗೈಡ್ಸ್‌ಗಳು ಹಾಗೂ ಶಾಲೆಯ ಮಕ್ಕಳು ಕೊಡವ ಸಂತ್ರಸ್ತರಿಗಾಗಿ ಅಗತ್ಯ ವಸ್ತುಗಳನ್ನು ಸಂಗ್ರಹಿಸಿ, ಕೊಡಗಿಗೆ ತೆರಳಿ ಅವುಗಳನ್ನು ಜಿಲ್ಲಾಧಿಕಾರಿಗಳ ಕಛೇರಿಗೆ ತಲುಪಿಸಿದರು. ಈ ಸಂದರ್ಭದಲ್ಲಿ ಶಾಲೆಯ ಪ್ರಾಂಶುಪಾಲರಾದ ಶ್ರೀಮತಿ ಅನುಪಾ ಕೌಶಿಕ, ಸ್ಕೌಟ್ ಮಾಸ್ಟರ್ ಶ್ರೀ ಪಿ. ವೈ. ಪಾಟೀಲ್, ಕಬ್ ಮಾಸ್ಟರ್ ಶ್ರೀಮತಿ ಚೇತನಾ ಪಾಟೀಲ ಶಿಕ್ಷಕಿ ತಸ್ಮೀಯಾ ಮುಲ್ಲಾ ಹಾಗೂ ದೈಹಿಕ ಶಿಕ್ಷಕರಾದ ಶ್ರೀ ಸುರೇಶ ಚೆನ್ನಾಳ ಇವರುಗಳು ಉಪಸ್ಥಿತರಿದ್ದರು.



## ಚಿಕ್ಕಮಗಳೂರು

ಅಕ್ಟೋಬರ್ 2 ರಂದು ಗಾಂಧೀಜಿಯವರ 150ನೇ ಜಯಂತಿಯನ್ನು ಜಿಲ್ಲಾ ಸ್ಕೌಟ್ಸ್ ಭವನದಲ್ಲಿ ಆಚರಿಸಲಾಯಿತು. ಮಹಾತ್ಮ ಗಾಂಧೀಜಿಯವರ ಭಾವಚಿತ್ರಕ್ಕೆ ಪುಷ್ಪನಮನ ಸಲ್ಲಿಸಲಾಯಿತು. ಈ ಸಂದರ್ಭದಲ್ಲಿ ಜಿಲ್ಲಾ ಸ್ಕೌಟ್ ಆಯುಕ್ತ ಶ್ರೀ ಎ.ಎನ್. ಮಹೇಶ್ ರವರು ಮಾತನಾಡಿ ಗಾಂಧೀಜಿಯವರ ಜೀವನಾದರ್ಶಗಳು ಅನುಕರಣೀಯ-ವಾದದ್ದು ಮತ್ತು ಸ್ವಾತಂತ್ರ್ಯ ಸಂಗ್ರಾಮದಲ್ಲಿ ಅಹಿಂಸೆಯ ಮೂಲಕ ಅವರ ನೇತೃತ್ವದ ಹೋರಾಟಗಳು ಇಂದಿನ ಹಿಂಸೆಯನ್ನು ಪ್ರೀತಿಸುವ ಪ್ರತಿಭಟನೆಗಳನ್ನು ಅಣುಕಿಸು-ವಂತಿದೆ ಎಂದರು.

ಕಾರ್ಯಕ್ರಮದ ಪ್ರಾರಂಭದಲ್ಲಿ ಸರ್ವಧರ್ಮ ಪ್ರಾರ್ಥನೆ ನಡೆಯಿತು. ಕಾರ್ಯಕ್ರಮದಲ್ಲಿ ಜಿಲ್ಲಾ ಪದಾಧಿಕಾರಿಗಳು ಉಪಸ್ಥಿತರಿದ್ದರು.



## ಚಾಮರಾಜನಗರ

ಸೆಪ್ಟೆಂಬರ್ 26 ರಿಂದ ಅಕ್ಟೋಬರ್ 2 ವರೆಗೆ ಡಯಟ್ ಸಂಸ್ಥೆ ಚಾಮರಾಜನಗರದಲ್ಲಿ ನಡೆದ ಮೂಲ ತರಬೇತಿ ಶಿಬಿರದಲ್ಲಿ 180 ಶಿಕ್ಷಕ-ಶಿಕ್ಷಕಿಯರು ಭಾಗವಹಿಸಿದ್ದರು. ಗಾಂಧಿ ಜಯಂತಿಯ ಪ್ರಯುಕ್ತ ಸ್ವಚ್ಛತಾ ಕಾರ್ಯ ಹಾಗೂ ಸರ್ವಧರ್ಮ ಪ್ರಾರ್ಥನೆ ಜರುಗಿತು.

ಶ್ರೀ ಮಂಜುನಾಥ, ಹಿರಿಯ ಉಪನ್ಯಾಸಕ, ಶ್ರೀ ಗೊಂಡಶೆಟ್ಟಿ ಹಾಗೂ ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು ಭಾಗವಹಿಸಿದ್ದರು.ಈ ಸಂದರ್ಭದಲ್ಲಿ ಎಂ.ಸಿ.ಕೆ.ಎಸ್. ಶಾಲಾ ಸ್ಕೌಟ್ಸ್-ಗೈಡ್ಸ್‌ಗಳು ಸ್ವಚ್ಛತಾ ಕಾರ್ಯದಲ್ಲಿ ಭಾಗವಹಿಸಿದ್ದರು. ಕು॥ ಪಿ. ಕಮಲಮ್ಮ, ಶ್ರೀ ಅಶೋಕ್ ಕುಮಾರ್ ಕೆ.ಪಿ.ರವರ ನೇತೃತ್ವದಲ್ಲಿ ಸರ್ವಧರ್ಮ ಕಾರ್ಯಕ್ರಮ ಜರುಗಿತು.



* ಅಕ್ಟೋಬರ್ 6 ರಿಂದ 8 ರ ವರೆಗೆ ಶ್ರೀ ಮಹದೇಶ್ವರ ಸ್ವಾಮಿ ಜಾತ್ರಾ ಸೇವಾ ಕಾರ್ಯದಲ್ಲಿ ಕುದೇರು, ಚಂದಕವಾಡಿ, ಅರಕಲವಾಡಿ, ಸೇವಾ ಭಾರತಿ, ಕಬ್ಬಹಳ್ಳಿ, ಜೈಹಿಂದ್ ಓಪನ್ ರೋವರ್ ಕ್ರ್ಯೂನ ರೋವರ್‌ಗಳು ಸೇವಾ ಕಾರ್ಯದಲ್ಲಿ ಭಾಗವಹಿಸಿದ್ದರು. ಸುಮಾರು 30 ರೋವರ್‌ಗಳು ಮತ್ತು ರೋವರ್ ಸ್ಕೌಟ್ ಲೀಡರ್ ಶ್ರೀ ಎಸ್. ಪ್ರದೀಪ್ ರವರು ಹಾಜರಿದ್ದರು.

* ಅಕ್ಟೋಬರ್ 13 ರಂದು ಜಿಲ್ಲಾ ಪಂಚಾಯತ್ ಕಛೇರಿಯಿಂದ ಚಾಮರಾಜೇಶ್ವರ ದೇವಸ್ಥಾನದ ವರೆಗೆ ದಸರಾ ಜಾಥಾ ಕಾರ್ಯಕ್ರಮ ಜರುಗಿತು. ಇದರಲ್ಲಿ ಒಟ್ಟು 110 ಸ್ಕೌಟ್-ಗೈಡ್, ಕಬ್-ಬುಲ್‌ಬುಲ್, ರೋವರ್-ರೇಂಜರ್ಸ್‌ಗಳು ಭಾಗವಹಿಸಿದ್ದರು. ಶ್ರೀ ಮಹೇಶ್, ಎನ್. ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಸಚಿವರು ಮತ್ತು ಶ್ರೀ ಪುಟ್ಟರಂಗಶೆಟ್ಟಿ ಜಿಲ್ಲಾ ಉಸ್ತುವಾರಿ ಸಚಿವರು ದಸರಾ ಜಾಥಾ ಕಾರ್ಯಕ್ರಮಕ್ಕೆ ಚಾಲನೆ ನೀಡಿದರು. ಈ ಕಾರ್ಯಕ್ರಮದಲ್ಲಿ ಡಿ.ಡಿ.ಪಿ.ಐ., ಮತ್ತು ಡಿ.ಡಿ.ಪಿ.ಯು. ಹಾಗೂ ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು ಹಾಜರಿದ್ದರು.

* ಅಕ್ಟೋಬರ್ 16 ರಂದು ದಸರಾ ಪಾರಂಪರಿಕೆ ನಡಿಗೆಮುತ್ತು ವಿಶ್ವ ಆಹಾರ ದಿನಾಚರಣೆಯನ್ನು ಆಚರಿಸಲಾಯಿತು. 26 ರೋವರ್‌ಗಳು ಹಾಗೂ ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು ಭಾಗವಹಿಸಿದ್ದರು.



* ಅಕ್ಟೋಬರ್ 13 ರಂದು ಜಿಲ್ಲಾಧಿಕಾರಿಗಳ ಕೇಂದ್ರ ಕಛೇರಿಯಲ್ಲಿ ಕೊಡಗು ಸಂತ್ರಸ್ತರ ನಿಧಿಗೆ ಸಂಗ್ರಹಿಸಿದ್ದ ರೂ. 57,156/- ಸಾವಿರ ರೂಪಾಯಿಗಳು ಹಾಗೂ ಬಟ್ಟೆಗಳನ್ನು ಜಿಲ್ಲಾಧಿಕಾರಿಗಳಿಗೆ ನೀಡಲಾಯಿತು. ಡಿ.ಡಿ.ಪಿ.ಯು. ರವರು ಮತ್ತು ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು ಹಾಜರಿದ್ದರು.

* ಅಕ್ಟೋಬರ್ 20 ರಂದು ಪೋಲಿಸ್ ಹುತಾತ್ಮರ ದಿನಾಚರಣೆಯ ಅಂಗವಾಗಿ ಶ್ರೀ ಚಾಮರಾಜೇಂದ್ರ ದೇವಸ್ಥಾನದಿಂದ ರಾಮಸಮುದ್ರದ ವರೆಗೆ ಮ್ಯಾರಥಾನ್ ಓಟದಲ್ಲಿ ಸುಮಾರು 30 ರೋವರ್-ರೇಂಜರ್‌ಗಳು ಭಾಗವಹಿಸಿದ್ದರು. ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳಾದ ಕು॥ ಪಿ.ಕಮಲಮ್ಮ (ಡಿ.ಓ.ಸಿ.) - ಶ್ರೀ ಅಶೋಕ್ ಕುಮಾರ್ ಕೆ.ಪಿ. (ಡಿ.ಓ), ಶ್ರೀ ಪ್ರದೀಪ್ ಎಸ್ (ಆರ್.ಎಸ್.ಎಲ್.) ರವರು ಹಾಜರಿದ್ದರು.

## ದಕ್ಷಿಣ ಕನ್ನಡ

ಸೆಪ್ಟೆಂಬರ್ 8 ರಿಂದ 9 ರ ವರೆಗೆ ವಾಣಿ ಪಿ.ಯು. ಕಾಲೇಜ್ ಬೆಳ್ತಂಗಡಿಯಲ್ಲಿ ಉಡುಪಿ, ಕಾಸರಗೋಡು ಜಿಲ್ಲೆ ಸಹಿತ ದಕ್ಷಿಣ ಕನ್ನಡ ಜಿಲ್ಲಾ ಮಕ್ಕಳ ಸಾಹಿತ್ಯ ಸಂಗಮ (ರಿ) ಮಂಗಳೂರು ಇದರ ಸಹಭಾಗಿತ್ವದಲ್ಲಿ ಜಿಲ್ಲಾ ಮಟ್ಟದ ಮಕ್ಕಳ ಧ್ವನಿ-2018 ಕಾರ್ಯಕ್ರಮ ನಡೆಯಿತು. ಈ ಕಾರ್ಯಕ್ರಮದಲ್ಲಿ ವಾಣಿ ಪದವಿ ಪೂರ್ವ ಕಾಲೇಜ್ ಬೆಳ್ತಂಗಡಿಯ ರೋವರ್ಸ್-ರೇಂಜರ್ಸ್ 2 ದಿನಗಳ ಕಾಲ ಸ್ವಯಂ ಸೇವಕರಾಗಿ ಸೇವೆ ಸಲ್ಲಿಸಿದರು. ಶಿಬಿರದ ನಾಯಕತ್ವವನ್ನು ರೋವರ್ ಸ್ಕೌಟ್ ಲೀಡರ್ ಶ್ರೀ ಬೆಳಿಯಪ್ಪ ಹಾಗೂ ರೇಂಜರ್ ಲೀಡರ್ ಕು. ರಕ್ಷಾರವರು ವಹಿಸಿದ್ದರು.

* ಸೆಪ್ಟೆಂಬರ್ 19 ರಿಂದ 20 ರ ವರೆಗೆ ಪುತ್ತೂರು ಶ್ರೀ ಮಹಾಲಿಂಗೇಶ್ವರ ದೇವಸ್ಥಾನದ ಮುಂಭಾಗದಲ್ಲಿ ತಾಲ್ಲೂಕು ಮಟ್ಟದ ಕನ್ನಡ ಸಾಹಿತ್ಯ ಸಮ್ಮೇಳನ ನಡೆಯಿತು. ಸಮ್ಮೇಳನದ ಅಧ್ಯಕ್ಷತೆಯನ್ನು ವಿವೇಕಾನಂದ ಕಾಲೇಜ್, ಪುತ್ತೂರಿನ ಪ್ರಾಂಶುಪಾಲರಾದ ಡಾ. ಪೀಟರ್ ವಿಲ್ಸನ್ ಪ್ರಭಾಕರ್ ವಹಿಸಿದ್ದರು. ಈ ಕಾರ್ಯಕ್ರಮದಲ್ಲಿ ಪುತ್ತೂರ್ ಕಾಲೇಜಿನ 100 ಕ್ಕಿಂತ ಹೆಚ್ಚು ರೋವರ್ಸ್-ರೇಂಜರ್ಸ್‌ಗಳು ಎರಡು ದಿನಗಳ ಕಾಲ ಸ್ವಯಂ ಸೇವಕರಾಗಿ ಸೇವೆ ಸಲ್ಲಿಸಿದರು. ಶಿಬಿರದ ನಾಯಕತ್ವವನ್ನು ಕಾಲೇಜಿನ ರೋವರ್ ಸ್ಕೌಟ್ ಲೀಡರ್ ಶ್ರೀ ಈಶ್ವರ್ ಪ್ರಸಾದ್, ರೇಂಜರ್ ಲೀಡರ್ ಕು. ದಿವ್ಯಾ. ದೀಪಿಕಾರವರು ವಹಿಸಿದ್ದರು.



* ಸೆಪ್ಟೆಂಬರ್ 22 ರಿಂದ 23 ರ ವರೆಗೆ ಸರಕಾರಿ ಉನ್ನತೀಕರಿಸಿದ ಹಿ.ಪ್ರಾ.ಶಾಲೆ ಮಾಲಾಡಿಯಲ್ಲಿ ಭಾರತ್ ಸ್ಕೌಟ್ಸ್-ಗೈಡ್ಸ್ ಮಡಂತ್ಯಾರು ಸ್ಥಳೀಯ ಸಂಸ್ಥೆಯ ಸ್ಕೌಟ್ಸ್-ಗೈಡ್ಸ್, ಕಬ್ಸ್-ಬುಲ್‌ಬುಲ್ಸ್‌ಗಳಿಗೆ ಪಟಲಾಂ ಮತ್ತು ಷಟ್ಕ ನಾಯಕರ ತರಬೇತಿಯನ್ನು ನಡೆಸಲಾಯಿತು. ಮಾಲಾಡಿ ಶಾಲೆಯ ಎಸ್.ಡಿ.ಎಂ.ಸಿ. ಅಧ್ಯಕ್ಷರಾದ ಶ್ರೀ ಸೋಮಯ್ಯ ಶಿಬಿರವನ್ನು ಉದ್ಘಾಟಿಸಿದರು. ಸಂಸ್ಥೆಯ ಅಧ್ಯಕ್ಷರಾದ ಹಾಜಿ. ಅಬ್ದುಲ್ ಲತೀಫ್ ಸಾಹೇಬರು ಮಾತನಾಡುತ್ತಾ ಸ್ಕೌಟ್ಸ್-ಗೈಡ್ಸ್ ಪ್ರತಿಜ್ಞೆ ಮತ್ತು ನಿಯಮವನ್ನು ತಮ್ಮ ಜೀವನದಲ್ಲಿ ಎಲ್ಲರೂ ಅಳವಡಿಸಿಕೊಂಡರೆ ಗಾಂಧೀಜಿಯವರ ಕನಸು ನನಸಾಗುವುದರಲ್ಲಿ ಸಂಶಯವಿಲ್ಲ. ಎನ್ನುತ್ತಾ ಶುಭ ಹಾರೈಸಿದರು. ಲಯನ್ಸ್ ಕ್ಲಬ್, ಬೆಳ್ತಂಗಡಿ ವಲಯದ ಅಧ್ಯಕ್ಷೆ ಹಾಗೂ ಮಡಂತ್ಯಾರು ಸ್ಕೌಟ್ಸ್-ಗೈಡ್ಸ್ ಸ್ಥಳೀಯ ಸಂಸ್ಥೆಯ ಉಪಾಧ್ಯಕ್ಷೆ ಶ್ರೀಮತಿ ಮೇದಿನಿ ಗೌಡರವರು ಮಾತನಾಡುತ್ತಾ ಎಳವಯಸ್ಸಿನಲ್ಲೇ ಮಕ್ಕಳಿಗೆ ನಾಯಕತ್ವವನ್ನು ಕಲಿಸುವುದರಿಂದ ಮಕ್ಕಳು ಬೆಳೆದಂತೆ ಜವಾಬ್ದಾರಿಯುತ ನಾಗರಿಕರಾಗುತ್ತಾರೆ ಎಂದರು. ಶಾಲಾ ಮುಖ್ಯೋಪಾಧ್ಯಾಯರಾದ ಶ್ರೀ ಜಯರಾಜ್ ಜೈನ್ ರವರು ಮಾತನಾಡಿ "ಶಿಸ್ತು ಇಲ್ಲದ ಜೀವನ ದಿಕ್ಕು ತಪ್ಪಿದ ನಾವೆಯಂತೆ" ಸಣ್ಣ ಪ್ರಾಯದಲ್ಲಿ ಕಲಿತ ಶಿಸ್ತು ಜೀವನದುದ್ದಕ್ಕೂ ಸಹಕಾರಿಯಾಗುತ್ತದೆ ಎಂದರು. ವೇದಿಕೆಯಲ್ಲಿ ಸಂಸ್ಥೆಯ ಉಪಾಧ್ಯಕ್ಷೆ ಶ್ರೀಮತಿ ರುಕ್ಮಿಣಿ, ಶಾಲೆಯ ಎಸ್.ಡಿ.ಎಂ.ಸಿ. ಸದಸ್ಯರಾದ ಶ್ರೀ ಅಶೋಕ್ ಮಡಿವಾಳ, ಹಳೆ ವಿದ್ಯಾರ್ಥಿ ಸಂಘದ ಅಧ್ಯಕ್ಷರಾದ ಶ್ರೀ ಆಸೀಫ್, ಕೋಶಾಧಿಕಾರಿ ಶ್ರೀಮತಿ ಸುಜಾತ ಮೊದಲಾದವರು ಉಪಸ್ಥಿತರಿದ್ದರು. ಕಾರ್ಯದರ್ಶಿ ಶ್ರೀ ಎಂ. ಶಾಂತಾರಾವ್ ಪ್ರಭು ಕಾರ್ಯಕ್ರಮದ ಮುನ್ನೋಟವಿತ್ತರು. ಜೊತೆ ಕಾರ್ಯದರ್ಶಿ ಶ್ರೀಮತಿ ಜೊಯ್ಸ್ ಬೆನೆಡಿಕ್ಟ್ ತಾವ್ರೋ ಸ್ವಾಗತಿಸಿದರು. ಸಹಾಯಕ ಕಾರ್ಯದರ್ಶಿ ಶದರೀ. ಧರಣೇಂದ್ರ ಕೆ. ಜೈನ್ ರವರು ಧನ್ಯವಾದ ಹೇಳಿದರು.

ಎರಡನೇ ದಿನ ಅಪರಾಹ್ನ ಮಾಲಾಡಿ ಶಾಲೆಯ ಎಸ್.ಡಿ.ಎಂ.ಸಿ. ಅಧ್ಯಕ್ಷರಾದ ಶ್ರೀ ಸೋಮಯ್ಯರವರ ಅಧ್ಯಕ್ಷತೆಯಲ್ಲಿ ಸಮಾರೋಪ ಸಮಾರಂಭವನ್ನು ಜರುಗಿಸಲಾಯಿತು. ಶಾಲಾ ಮುಖ್ಯೋಪಾಧ್ಯಾಯರಾದ ಶ್ರೀ ಜಯರಾಜ್ ರವರು ಗೈಡಿಂಗ್ ಸರ್ಟಿಫಿಕೆಟ್‌ನ ಮಹತ್ವವನ್ನು ತಿಳಿಸಿದರು. ಕಟ್ಟದ ಬೈಲು ಶಾಲಾ ಮುಖ್ಯೋಪಾಧ್ಯಾಯರಾದ ಶ್ರೀ ಎಡ್ವರ್ಡ್ ಡಿ'ಸೋಜರವರು ಸ್ವಾಗತಿಸಿ, ಕೋಶಾಧಿಕಾರಿ ಶ್ರೀಮತಿ ಸುಜಾತರವರು ಧನ್ಯವಾದ ವಿತ್ತರು. ಕಾರ್ಯದರ್ಶಿ ಎಂ. ಶಾಂತಾರಾಮ್ ಪ್ರಭು ಕಾರ್ಯಕ್ರಮ ನಿರ್ವಹಿಸಿದರು.

* ಎಸ್.ಡಿ.ಎಂ. ಆಂಗ್ಲ ಮಾಧ್ಯಮ ಶಾಲೆಯಲ್ಲಿ ಕಬ್-ಬುಲ್‌ಬುಲ್, ಸ್ಕೌಟ್-ಗೈಡ್‌ಗಳು ಗಣೇಶನಿಗೆ ಸ್ಕಾರ್ಫ್ ಹಾಗೂ ಓಗಲ್ ತೊಡಿಸಿ ಗಣಪತಿಯು ಕೂಡಾ ಸ್ಕೌಟ್-ಗೈಡ್ ಅಭಿಮಾನಿ ಎಂದು ಸಾಬೀತುಪಡಿಸಿ, ಪೂಜಾ ಕಾರ್ಯಕ್ರಮವನ್ನು ಆಯೋಜಿಸಿದರು.

ಗೈಡ್ ಕು॥ ಸಾಧ್ವಿ ಜೈನ್ ಗಣಪತಿ ಬಗ್ಗೆ ವಿವರಿಸಿದರು. ಸಮ್ಯದ್ ಜೈನ್ ಹಾಗೂ ಶ್ರಿಯಾಸ್ ಗಣಪತಿಗೆ ಪೂಜಾ ವಿಧಾನವನ್ನು ನೆರವೇರಿಸಿದರು. ಕಾರ್ಯಕ್ರಮದಲ್ಲಿ ಶಾಲಾ ಮುಖ್ಯೋಪಾಧ್ಯಾಯಿನಿ ಶ್ರೀಮತಿ ಹೇಮಲತಾ ಎಮ್. ಆರ್. ಗೈಡರ್ ಶ್ರೀಮತಿ ಕಾರುಣ್ಯ ಹಾಗೂ ಶಾಲೆಯ ಶಿಕ್ಷಕ ವೃಂದದವರು ಪಾಲ್ಗೊಂಡಿದ್ದರು. ಕಾರ್ಯಕ್ರಮದ ಸಂಯೋಜನೆ ಶ್ರೀಮತಿ ಪ್ರಮೀಳಾ ವಹಿಸಿಕೊಂಡಿದ್ದರು.

* ಅಕ್ಟೋಬರ್ 2 ರಂದು ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆಯ ವತಿಯಿಂದ ಅಮೃತ ವಿದ್ಯಾಲಯ, ಬೊಕ್ಕಪಟ್ನ ಶಾಲೆ ಮತ್ತು ಕುಡ್ಲ ಮುಕ್ತದಳದ ಸಹಯೋಗದಲ್ಲಿ ಮಹಾತ್ಮ ಗಾಂಧಿ ಜಯಂತಿಯನ್ನು ಭಾರತ್ ಸ್ಕೌಟ್ಸ್-ಗೈಡ್ಸ್ ಸಭಾಭವನ ಲಾಲ್‌ಬಾಗ್‌ನ ಸಭಾಭವನದಲ್ಲಿ ನಡೆಯಿತು. ಮಹಾತ್ಮ ಗಾಂಧಿಯವರ ಭಾವಚಿತ್ರಕ್ಕೆ ಪುಷ್ಪಾರ್ಚನೆಯನ್ನು ಗೈಯುವುದರ ಮೂಲಕ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಎನ್.ಜಿ. ಮೋಹನ್ ರವರು ಕಾರ್ಯಕ್ರಮಕ್ಕೆ ಚಾಲನೆ ನೀಡಿದರು. ನಂತರ ಸರ್ವಧರ್ಮ ಪ್ರಾರ್ಥನೆಯು ಶ್ರೀಮತಿ ಜಯಶ್ರೀ ಡಿ.ಟಿ.ಸಿ. (ಗೈ) ಇವರ ನೇತೃತ್ವದಲ್ಲಿ ನಡೆಯಿತು. ಕಾರ್ಯಕ್ರಮದಲ್ಲಿ ಜಿಲ್ಲಾ ಉಪಾಧ್ಯಕ್ಷರಾದ ಶ್ರೀ ವಸಂತ್ ರಾವ್, ಶ್ರೀ ಸುದರ್ಶನ್ ಮಂಗಳೂರು ಜಿಲ್ಲಾ ವ್ಯವಸ್ಥಾಪಕರು ಶ್ರೀ ಭಾಸ್ಕರ್, ಜಿಲ್ಲಾ ಯುವ ಘಟಕದ ಅಧ್ಯಕ್ಷರು ಶ್ರೀ ಪ್ರೀತೇಶ್, ಜ್ಯೋತಿ ಮಹಿಳಾ ಕಾಲೇಜಿನ ವಿದ್ಯಾರ್ಥಿಗಳು ಹಾಗೂ ಸರ್ಕಾರಿ ಪ್ರಥಮ ದರ್ಜೆ ಕಾಲೇಜು ರಥಬೀದಿಯ ವಿದ್ಯಾರ್ಥಿಗಳು ಭಾಗವಹಿಸಿದ್ದರು. ಜಿಲ್ಲಾ ಸಂಘಟಕ ಶ್ರೀ ಭರತ್ ರಾಜ್ ರವರು ಕಾರ್ಯಕ್ರಮವನ್ನು ಸಂಘಟಿಸಿದರು. ಸರ್ವಧರ್ಮ ಪ್ರಾರ್ಥನೆಯ ನಂತರ ಜಿಲ್ಲಾ ಸಂಸ್ಥೆಯ ಸುತ್ತಮುತ್ತಲಿನ ಪರಿಸರವನ್ನು ಸ್ವಚ್ಛಗೊಳಿಸಲಾಯಿತು.

* ಮಂಗಳೂರು ಸೆಂಟ್ರಲ್ ರೈಲ್ವೇ ನಿಲ್ದಾಣದಲ್ಲಿ ನಡೆದ ಸ್ವಚ್ಛತಾ ಕಾರ್ಯಕ್ರಮದಲ್ಲಿ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಎನ್. ಜಿ. ಮೋಹನ್ ಮಂಗಳೂರು ನಗರ ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿ ಶ್ರೀ ನಾರಾಯಣ್, ಜಿಲ್ಲಾ ಯುವಘಟಕದ ಶ್ರೀ ಪ್ರೀತೇಶ್ ಹಾಗೂ ಜ್ಯೋತಿ ಮಹಿಳಾ ಕಾಲೇಜಿನ ರೇಂಜರ್ಸ್‌ಗಳು ಭಾಗವಹಿಸಿದ್ದರು.

* ಅಕ್ಟೋಬರ್ 6 ರಿಂದ 8 ರ ವರೆಗೆ ಜಿಲ್ಲಾ ತರಬೇತಿ ಕೇಂದ್ರ, ಪಿಲಿಕುಳದಲ್ಲಿ ಜಿಲ್ಲಾ ಮಟ್ಟದ ರೋವರ್ಸ್-ರೇಂಜರ್ಸ್ ಮೇಟ್ ತರಬೇತಿ ಶಿಬಿರ ನಡೆಯಿತು. ಈ ಶಿಬಿರದಲ್ಲಿ 49 ರೋವರ್ಸ್, 48 ರೇಂಜರ್ಸ್‌ಗಳು ಭಾಗವಹಿಸಿದ್ದರು. ಶಿಬಿರ ನಾಯಕರಾಗಿ ಶ್ರೀ ಪ್ರತಿಮ್ ಕುಮಾರ್ ಶ್ರೀಮತಿ ಜಯಶ್ರೀ ಎಲ್.ಟಿ. (ಗೈ) ಸಹಕರಿಸಿದರು. ಜಿಲ್ಲಾ ಸಂಘಟಕ ಶ್ರೀ ಭರತ್ ರಾಜ್ ಕೆ. ಶಿಬಿರವನ್ನು ಸಂಘಟಿಸಿದರು.



* ಅಕ್ಟೋಬರ್ 3 ರಂದು ಭಿನ್ನ ಸಾಮರ್ಥ್ಯದ ಸ್ಕೌಟ್-ಗೈಡ್ಸ್, ಕಬ್ಸ್-ಬುಲ್‌ಬುಲ್ಸ್, ದಳಗಳ 2 ದಿನಗಳ ಶಿಬಿರವನ್ನು ಶಾಲಾ ಪ್ರಾಂಶುಪಾಲರಾದ ಶ್ರೀಮತಿ ಮರಿಯಾ ಶ್ರುತಿ ಎ.ಸಿ. ಇವರು ಉದ್ಘಾಟಿಸಿದರು. ರಾತ್ರಿ 8 ಗಂಟೆಗೆ ಸರಿಯಾಗಿ ಶಿಬಿರಾಗ್ನಿಯನ್ನು ನಡೆಸಲಾಯಿತು. ಈ ಶಿಬಿರದಲ್ಲಿ 34 ಸ್ಕೌಟ್ಸ್, 30 ಗೈಡ್ಸ್, 17 ಕಬ್ಸ್ ಮತ್ತು 15 ಬುಲ್‌ಬುಲ್ಸ್‌ಗಳು ಭಾಗವಹಿಸಿದ್ದರು.

ಅಕ್ಟೋಬರ್ 4 ರಂದು ಗೈಡ್ ಕ್ಯಾಪ್ಟನ್ ಲೋನಾ ಇವರು ಮುಖ್ಯ ಅತಿಥಿಗಳಾಗಿ ಭಾಗವಹಿಸಿದರು. ಇವರೊಂದಿಗೆ ಜಿಲ್ಲಾ ಪದಾಧಿಕಾರಿಗಳು, ಮಹಿಳಾ ಮತ್ತು ಮಕ್ಕಳ ಕಲ್ಯಾಣಾಧಿಕಾರಿ ಶ್ರೀಮತಿ ಯಮುನಾ, ಅಪೋಸ್ತಲಿಕ್ಕಾರ್ಮೆಲ್ ಸಮೂಹ ಶಿಕ್ಷಣ ಸಂಸ್ಥೆಗಳ ಕಾರ್ಯದರ್ಶಿ ಭಗಿನಿ ಐಡಾ ಬರ್ಬೋಜಾ ಎ.ಸಿ, ಶಾಲಾ ಜಂಟಿ ಕಾರ್ಯದರ್ಶಿ ಭಗಿನಿ ಮರಿಯಾ ಅನಿಟಾ ಎ.ಸಿ. ರಕ್ಷಕ-ಶಿಕ್ಷಕ ಸಂಘದ ಅಧ್ಯಕ್ಷರಾದ ಶ್ರೀಮತಿ ಐರಿನ್ ಪಿಂಟೋ ಹಾಗೂ ಶಾಲಾ ಪ್ರಾಂಶುಪಾಲರಾದ ಭಗಿನಿ ಶ್ರುತಿ ಇವರು ಉಪಸ್ಥಿತರಿದ್ದರು. ಕದ್ರಿ ಪೊಲೀಸ್ ಠಾಣೆ ಅಧಿಕಾರಿಗಳಾದ ಶ್ರೀ ಮಾರುತಿ ಹಾಗೂ ಶ್ರೀ ಪ್ರಶಾಂತ್ ಇವರು ಶಾಲೆಗೆ ಆಗಮಿಸಿ ಬಾಲಾಪರಾಧ ಮತ್ತು ಇತರ ಕಾನೂನು ವ್ಯವಸ್ಥೆಗಳ ಬಗ್ಗೆ ಉಪಯುಕ್ತ ಮಾಹಿತಿಯನ್ನು ಶಿಬಿರಾರ್ಥಿಗಳಿಗೆ ನೀಡಿದರು. ಶಿಬಿರಾರ್ಥಿಗಳು ಶಾಲೆಯ ಹೊರಗೆ ಇರುವ ಬಸ್ ನಿಲ್ದಾಣದ ಸುತ್ತ ಮುತ್ತ ಪರಿಸರ ಸ್ವಚ್ಛಮಾಡಿ ಶ್ರಮದಾನ ಮಾಡಿದರು.

* ಅಕ್ಟೋಬರ್ 8 ರಿಂದ 9 ರ ವರೆಗೆ ಭಾರತ್ ಸ್ಕೌಟ್ಸ್-ಗೈಡ್ಸ್ ಸ್ಥಳೀಯ ಸಂಸ್ಥೆ ಬೆಳ್ತಂಗಡಿ ಇವರ ವತಿಯಿಂದ ಪಟಲಾಂ ನಾಯಕರ ತರಬೇತಿಯು ವಾಣಿ ವಿದ್ಯಾ ಸಂಸ್ಥೆ ಹಳೇ ಕೋಟೆ, ಬೆಳ್ತಂಗಡಿಯಲ್ಲಿ ನಡೆಯಿತು. ಕಾರ್ಯಕ್ರಮದ ಉದ್ಘಾಟನೆಯನ್ನು ಮಾಡಿ ಮಾತನಾಡಿದ ವಿಧಾನ ಪರಿಷತ್ ಸದಸ್ಯ ಶ್ರೀ ಹರೀಶ್ ಕುಮಾರ್ ರವರು ಸ್ಕೌಟ್ ಗೈಡ್ ಚಳುವಳಿಯು ಹಿಂದಿನಿಂದಲೂ ಇರುವಂತದ್ದು, ಶಿಸ್ತು ನಾಯಕತ್ವ ಗುಣವು ವಿದ್ಯಾರ್ಥಿ ಜೀವನದಲ್ಲಿ ಅತ್ಯಗತ್ಯ. ಈ ಗುಣಗಳನ್ನು ವಿದ್ಯಾರ್ಥಿಗಳು ತನ್ನ ಜೀವನದುದ್ದಕ್ಕೂ ಅಳವಡಿಸಿಕೊಳ್ಳುವುದರಲ್ಲಿ ಸ್ಕೌಟ್‌ನ ಪಾತ್ರ ಬಹಳ ಪ್ರಮುಖವಾದುದು ಎಂದು ತಿಳಿಸಿದರು.

ನಂತರ ಶಿಬಿರಾರ್ಥಿಗಳಿಗೆ ಸಂಚಾರಿ ಪೋಲಿಸ್ ಉಪನಿರೀಕ್ಷಕರಾದ ಶ್ರೀ ಓಡಿಯಪ್ಪ ಗೌಡ ಹಾಗೂ ಶ್ರೀ ರಾಮಚಂದ್ರ ಇವರು ಸಂಚಾರಿ ನಿಯಮದ ಬಗ್ಗೆ ಮಾಹಿತಿಯನ್ನು ನೀಡಿ ಚರ್ಚ್ ರೋಡ್ ಮತ್ತು ಗುರುವಾಯನಕೆರೆಯಲ್ಲಿ ಸಂಚಾರಿ ನಿಯಮದ ಬಗ್ಗೆ ಪ್ರಾತ್ಯಕ್ಷಿತೆಯನ್ನು ನೀಡಿದರು.

ಕಾರ್ಯಕ್ರಮದಲ್ಲಿ ವಿಧಾನ ಪರಿಷತ್ ಸದಸ್ಯ ಶ್ರೀ ಹರೀಶ್ ಕುಮಾರ್ ಇವರಿಗೆ ಅಭಿನಂದನಾ ಕಾರ್ಯಕ್ರಮವು ನಡೆಯಿತು. ವೇದಿಕೆಯಲ್ಲಿ ಸ್ಥಳೀಯ ಸಂಸ್ಥೆಯ ಅಧ್ಯಕ್ಷರಾದ ಶ್ರೀ ರಮಾನಂದ ಸಾಲ್ಯಾನ್. ಶ್ರೀಮತಿ ಲೋಕೇಶ್ವರಿ ವಿನಯ ಚಂದ್ರ, ವಾಣಿ ಆಂಗ್ಲ ಮಾದ್ಯಮ ಶಾಲೆಯ ಮುಖ್ಯ ಶಿಕ್ಷಕ ಶ್ರೀ ಲಕ್ಷ್ಮೀ ನಾರಾಯಣ, ವಾಣಿ ಪದವಿ ಪೂರ್ವ ಕಾಲೇಜಿನ ಪ್ರಾಂಶುಪಾಲರಾದ ಶ್ರೀ ಯದುಪತಿಗೌಡ, ಸ್ಥಳೀಯ ಸಂಸ್ಥೆಯ ಉಪಾಧ್ಯಕ್ಷರಾದ ಶ್ರೀ ವಿಠಲ ಶೆಟ್ಟಿ, ಕಾರ್ಯದರ್ಶಿ ಶ್ರೀಮತಿ ಪ್ರಮೀಳಾ, ಕೋಶಾಧಿಕಾರಿ ಶ್ರೀ ರವಿಕುಮಾರ್ ಮುಂತಾದವರು ಉಪಸ್ಥಿತರಿದ್ದರು.

* ಅಕ್ಟೋಬರ್ 8 ಮತ್ತು 9 ರಂದು ಭಾರತ್ ಸ್ಕೌಟ್ಸ್-ಗೈಡ್ಸ್ ಸ್ಥಳೀಯ ಸಂಸ್ಥೆ ಬೆಳ್ತಂಗಡಿಯ 2 ದಿನಗಳ ಪಟಲಾಂ ನಾಯಕರ ತರಬೇತಿ ಶಿಬಿರವು ನಡೆಯಿತು.

ಅಕ್ಟೋಬರ್ 9 ರಂದು ನಡೆದ ಸಮಾರೋಪ ಸಮಾರಂಭ ಕಾರ್ಯಕ್ರಮದ ಅಧ್ಯಕ್ಷತೆಯನ್ನು ಸ್ಕೌಟ್-ಗೈಡ್ ಸಂಸ್ಥೆಯ ಅಧ್ಯಕ್ಷರಾದ ಶ್ರೀ ರಮಾನಂದ ಸಾಲಿಯಾನ್ ವಹಿಸಿದ್ದರು. ವೇದಿಕೆಯಲ್ಲಿ ಸ್ಕೌಟ್-ಗೈಡ್ ಸಂಸ್ಥೆಯ ಉಪಾಧ್ಯಕ್ಷರಾದ ಶ್ರೀ ಪಿಠಲ್ ಶೆಟ್ಟಿ, ಕಾರ್ಯದರ್ಶಿ ಶ್ರೀಮತಿ ಪ್ರಮೀಳಾ, ಕೋಶಾಧಿಕಾರಿ ಶ್ರೀ ರವಿಕುಮಾರ್, ಶಿಬಿರದ ನಾಯಕರುಗಳಾದ ಶ್ರೀಮತಿ ಸಂಧ್ಯಾ ಶೆಣೈ, ಶ್ರೀ ಪ್ರಸಾದ್ ಆಚಾರ್ಯ, ಶ್ರೀ ಪ್ರಸಾದ್ ಕುಮಾರ್, ಶ್ರೀ ಗೋಪಾಲಕೃಷ್ಣ, ಶ್ರೀ ವಾಲ್ಟರ್ ಜೆ. ಪಿಂಟೋ, ಮೊದಲಾದವರು ಉಪಸ್ಥಿತರಿದ್ದರು.

ಕಾರ್ಯಕ್ರಮ ನಿರೂಪಣೆಯನ್ನು ಶ್ರೀಮತಿ ಸಂಧ್ಯಾ ಶೆಣೈ, ಸ್ವಾಗತವನ್ನು ಶ್ರೀ ಪ್ರಸಾದ್ ಕುಮಾರ್ ಹಾಗೂ ಧನ್ಯವಾದವನ್ನು ಕಾರ್ಯದರ್ಶಿ ಶ್ರೀಮತಿ ಪ್ರಮೀಳಾರವರು ನೆರವೇರಿಸಿಕೊಟ್ಟರು.



## ಗದಗ

ಅಕ್ಟೋಬರ್ 2 ರಂದು ಗದಗ ರೈಲ್ವೇ ನಿಲ್ದಾಣದಲ್ಲಿ ರೇಲ್ವೇ ಶಾಲೆಯ ಸ್ಕೌಟ್ಸ್-ಗೈಡ್ಸ್‌ಗಳಿಂದ ಸ್ವಚ್ಚತೆಯನ್ನು ನಡೆಸಲಾಯಿತು. ರೇಲ್ವೆ ಇಲಾಖೆಯ ಅಧಿಕಾರಿಗಳು, ಶಾಲೆಯ ಸಿಬ್ಬಂದಿ, ಶ್ರೀ ಮಂಜುನಾಥ ಮುಖ್ಯೋಪಾಧ್ಯಾಯರು ಹಾಗೂ ಶ್ರೀ ಎ.ಎಸ್. ಶಿವುಕುಮಾರ ಸಹಾಯಕ ರಾಜ್ಯ ಸಂಘಟನಾ ಆಯುಕ್ತರು ಭಾಗವಹಿಸಿದ್ದರು.



## ಹಾಸನ

ಅಕ್ಟೋಬರ್ 10 ರಂದು ಸಂತ ಫಿಲೋಮಿನ ಹಿರಿಯ ಪ್ರಾಥಮಿಕ ಶಾಲೆ, ಹಾಸನ ಇಲ್ಲಿ ಬುಲ್‌ಬುಲ್ಸ್‌ಗಳಿಗೆ ದೀಕ್ಷಾ ಸಮಾರಂಭ ಕಾರ್ಯಕ್ರಮ ಹಾಗೂ ಹೀರಕ್ ಪಂಖ್ ಪರೀಕ್ಷಾ ಶಿಬಿರವನ್ನು ಆಯೋಜಿಸಲಾಗಿತ್ತು. ಈ ಕಾರ್ಯಕ್ರಮದಲ್ಲಿ 16 ಮಕ್ಕಳು ದೀಕ್ಷೆ ಪಡೆದು 08 ಮಕ್ಕಳು ಹೀರಕ್ ಪಂಖ್ ಪರೀಕ್ಷಾ ಶಿಬಿರದಲ್ಲಿ ಭಾಗವಹಿಸಿದ್ದರು. ಸದರಿ ಕಾರ್ಯಕ್ರಮ ಹಾಗೂ ಪರೀಕ್ಷಾ ಶಿಬಿರದಲ್ಲಿ ಜಿಲ್ಲಾ ಕಾರ್ಯದರ್ಶಿ ಶ್ರೀ ಮುತ್ತೇಗೌಡ ರವರು ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದರು.

ನಂತರ ಇದೇ ಕಾರ್ಯಕ್ರಮದಲ್ಲಿ ಪ್ರೌಢಶಾಲಾ ವಿಭಾಗದ ಮುಖ್ಯೋಪಾಧ್ಯಾರು 2017-18 ನೇ ಸಾಲಿನ ಹೀರಕ್ ಪಂಖ್ ಪ್ರಮಾಣಪತ್ರವನ್ನು ವಿತರಿಸಿದರು.



ಕಾರ್ಯಕ್ರಮದಲ್ಲಿ ಶಾಲೆಯ ಮುಖ್ಯೋಪಾಧ್ಯಾಯರು ಸಿಸ್ಟರ್ ಅಮೂಲ್ಯ, ಜಿಲ್ಲಾ ಜಂಟಿ ಕಾರ್ಯದರ್ಶಿ ಶ್ರೀಮತಿ ಕಾಂಚನಮಾಲ, ಜಿಲ್ಲಾ ಸಂಘಟಕಿ, ಕು॥ ಪ್ರಿಯಾಂಕ ಹೆಚ್.ಎಂ. ಫ್ಲಾಕ್ ಲೀಡರ್ ಸಿಸ್ಟರ್ ಸೋಫಿಯಾ ಫರ್ನಾಂಡೀಸ್ ಹಾಗೂ ಪೋಷಕರು ಭಾಗವಹಿಸಿದ್ದರು.

## ಕಾರವಾರ

ಆಗಸ್ಟ್ 25 ರಿಂದ 31 ರ ವರೆಗೆ ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ ಕಾರವಾರ ವತಿಯಿಂದ ಹವ್ಯಕ ಕಲ್ಯಾಣ ಮಂಟಪ, ಹೊನ್ನಾವರ ಇಲ್ಲಿ ಮೂಲ ತರಬೇತಿ ಶಿಬಿರ ನಡೆಸಲಾಯಿತು. ಈ ಶಿಬಿರದಲ್ಲಿ 25 ಗೈಡ್ ಕ್ಯಾಪ್ಟನ್, 22ಸ್ಕೌಟ್ ಮಾಸ್ಟರ್, 10 ಕಬ್ಸ್ ಮಾಸ್ಟರ್‌ಗಳು ಭಾಗವಹಿಸಿದ್ದರು.

ಶ್ರೀ ಬಿ.ಡಿ. ಫರ್ನಾಂಡೀಸ್, ಜಿಲ್ಲಾ ಕಾರ್ಯದರ್ಶಿ, ಕಾರವಾರ ಸ್ಕೌಟ್ಸ್ ಶಿಬಿರ ನಾಯಕರಾಗಿ, ಶ್ರೀಮತಿ ಕೆ.ವಿ. ಶಾಮಲ, ಎಸ್.ಟಿ.ಸಿ.(ಗೈ)ರವರು ಗೈಡ್ ಶಿಬಿರದ ನಾಯಕಿಯಾಗಿ ಹಾಗೂ ಶ್ರೀನಾಯಕ್ ಬೊಮ್ಮನ್ ಕಬ್ ಶಿಬಿರದ ನಾಯಕರಾಗಿದ್ದರು. ಜಿಲ್ಲಾ ಮುಖ್ಯ ಆಯುಕ್ತರಾದ ಡಾ॥ ಸಬಾಹಿತ್, ನೋಡಲ್ ಅಧಿಕಾರಿ ಶ್ರೀ ನಾಗರಾಜ್ ನಾಯಕ್‌ರವರು ಭಾಗವಹಿಸಿದ್ದರು.

* ಅಕ್ಟೋಬರ್ 7 ರಂದು ಇಕೋ ಬೀಚ್ ನಲ್ಲಿ ಸ್ವಚ್ಛತಾ ಕಾರ್ಯಕ್ರಮ ನಡೆಸಲಾಯಿತು ಶಿಬಿರದಲ್ಲಿ 150 ಸ್ಕೌಟ್ಸ್-ಗೈಡ್ಸ್‌ಗಳು, 25 ಸ್ಕೌಟರ್ಸ್-ಗೈಡರ್ಸ್‌ಗಳು ಭಾಗವಹಿಸಿದ್ದರು. ಜಿಲ್ಲಾ ಪದಾಧಿಕಾರಿಗಳು, ಎ.ಎಸ್.ಓ.ಸಿ.ಎಸ್. ರವರು ಭಾಗವಹಿಸಿದ್ದರು.

* ಸೆಪ್ಟೆಂಬರ್ 25 ರಂದು ಕುಮಟಾದ ಗಿಬ್ ಗರ್ಲ್ಸ್ ಶಾಲೆಯಲ್ಲಿ ವಿ.ಪಿ. ದೀನದಯಾಳು ನಾಯ್ಡುರವರ ಶತಮಾನೋತ್ಸವ ಮುಕ್ತಾಯ ಸಮಾರಂಭದ ಅಂಗವಾಗಿ ಗಿಬ್ ಗರ್ಲ್ಸ್ ಹೈಸ್ಕೂಲ್ ಕುಮಟಾದಲ್ಲಿ ಸ್ಕೌಟ್ಸ್-ಗೈಡ್ಸ್‌ಗಳಿಂದ ಚಿತ್ರಕಲಾ ಸ್ಪರ್ಧೆಯನ್ನು ನಡೆಸಲಾಯಿತು. ಈ ಕಾರ್ಯಕ್ರಮದಲ್ಲಿ ಸುಮಾರು 200 ವಿದ್ಯಾರ್ಥಿಗಳು ಭಾಗವಹಿಸಿದ್ದರು. ವಿಜೇತರಿಗೆ ಗೌರವಧನ ನೆನಪಿನ ಕಾಣಿಕೆ ನೀಡಲಾಯಿತು.

* ಅಕ್ಟೋಬರ್ 1 ರಂದು ಹೊನ್ನಾವರದಲ್ಲಿ ಸ್ವಾಮಿ ವಿವೇಕಾನಂದ ರವರ ರಥಯಾತ್ರೆಯಲ್ಲಿ ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು ಹಾಗೂ 260 ರೋವರ್ಸ್-ರೇಂಜರ್ಸ್‌ಗಳು ಭಾಗವಹಿಸಿದ್ದರು.

* ಅಕ್ಟೋಬರ್ 2 ರಂದು ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಸ್ವಚ್ಛತಾ ಅಭಿಯಾನ ಕಾರ್ಯಕ್ರಮ 8 ದಿನಗಳ ಕಾಲ ನಡೆಯಿತು. ಈ ಶಿಬಿರದಲ್ಲಿ ಪ್ರತಿದಿನ ಕಾರವಾರದ ವಿವಿದ ಶಾಲೆಗಳ ಸ್ಕೌಟ್ಸ್-ಗೈಡ್ಸ್, ರೋವರ್ಸ್-ರೇಂಜರ್ಸ್ ಭಾಗವಹಿಸಿದ್ದರು. ಭಾಗವಹಿಸಿದ ವಿದ್ಯಾರ್ಥಿಗಳಿಗೆ ಅಧಿಕಾರಿ ವರ್ಗದವರಿಗೆ ಕ್ಯಾಪ್, ಹ್ಯಾಂಡ್ ಗ್ಲೌಸ್, ಮಾಸ್ಕ್, ಟೀ ಷರ್ಟ್ಸ್‌ಗಳನ್ನು ನೀಡಲಾಯಿತು.

* ಅಕ್ಟೋಬರ್ 2ರಂದು ಹೊನ್ನಾವರದ ಮಾರ್ಥೋಮ ಶಾಲೆಯಲ್ಲಿ ಸರ್ವಧರ್ಮ ಪ್ರಾರ್ಥನೆ ನಡೆಸಲಾಯಿತು. 300 ಸ್ಕೌಟ್ಸ್-ಗೈಡ್ಸ್‌ಗಳು, ಜಿಲ್ಲಾ ಪದಾಧಿಕಾರಿಗಳು ಹಾಗೂ ಜಿಲ್ಲಾ ಕಾರ್ಯದರ್ಶಿಯವರು ಭಾಗವಹಿಸಿದ್ದರು.

* ಅಕ್ಟೋಬರ್ 2 ರಂದು ಕುಮಟದ ಗರ್ಲ್ಸ್ ಹೈಸ್ಕೂಲ್‌ನಲ್ಲಿ ಶ್ರೀಮತಿ ಬೇಬಿ ಪಡಿಯಾರ್, ಡಿ.ಟಿ.ಸಿ., ಸ್ಕೌಟ್-ಗೈಡ್‌ಗಳಿಗೆ ಸ್ವಚ್ಛತಾ ಕಾರ್ಯಕ್ರಮ ಹಾಗೂ ಸರ್ವಧರ್ಮ ಪ್ರಾರ್ಥನೆ ನಡೆಸಿದರು. 160 ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು.

* ಅಕ್ಟೋಬರ್ 8 ರಿಂದ 11 ರ ವರೆಗೆ ಜಿಲ್ಲಾ ಕಛೇರಿ ಹೊನ್ನಾವರದಲ್ಲಿ ಸ್ವಚ್ಛತಾ ಕಾರ್ಯಕ್ರಮ ನಡೆಸಲಾಯಿತು. ಈ ಸಂದರ್ಭದಲ್ಲಿ ತಾಲ್ಲೂಕ್ ಪಂಚಾಯತ್ ಹಾಗೂ ತಹಶೀಲ್ದಾರ್ ರವರ ವತಿಯಿಂದ ವಿದ್ಯುತ್ ವ್ಯವಸ್ಥೆ, ಮುಂಬಾಗದಲ್ಲಿ ನೆರಳಿಗೆ ಶೀಟ್ ವ್ಯವಸ್ಥೆ ಮತ್ತು ಕಛೇರಿಯಲ್ಲಿ ಸೂರ್ಯ ಬಲ್ಬುಗಳನ್ನು ಮಾಡಲಾಯಿತು. ಇದರ ವ್ಯವಸ್ಥೆಯ ಜವಾಬ್ದಾರಿಯನ್ನು ತಾಲ್ಲೂಕ್ ಪಂಚಾಯತ್ ಸದಸ್ಯಾದ ಶ್ರೀ ರಾಜು ನಾಯ್ಕ ರವರು ವಹಿಸಿದ್ದರು.

* ಸೆಪ್ಟೆಂಬರ್ 4 ರಂದು ಕುಮಟಾದ ಡಯಟ್ ನಲ್ಲಿ ನಡೆದ "ಕಾರವಾರ ಜಿಲ್ಲೆಯ ಪ್ರಗತಿಶೀಲನಾ ಸಭೆ"ಗೆ ಶ್ರೀ ಪಿ.ಜಿ.ಆರ್. ಸಿಂಧ್ಯ ರಾಜ್ಯ ಮುಖ್ಯ ಆಯುಕ್ತರು ಆಗಮಿಸಿದ್ದರು. ಡಾ॥ ಜಿ.ಜಿ. ಸಭಾಹಿತ್, ಜಿಲ್ಲಾ ಮುಖ್ಯ ಆಯುಕ್ತರು, ರಾಜ್ಯ ಆಯುಕ್ತರಿಗೆ ಹೂಗುಚ್ಛ ನೀಡುವ ಮೂಲಕ ಸ್ವಾಗತಿಸಿದರು.

ಶ್ರೀ ಪಿ.ಜಿ.ಆರ್. ಸಿಂಧ್ಯರವರು ಮಾನ್ಯ ಮುಖ್ಯಮಂತ್ರಿಗಳ ಆದೇಶವನ್ನು ಸಭೆಗೆ ತಿಳಿಸಿದರು. ಸ್ಕೌಟ್-ಗೈಡ್‌ಗೆಂದು ವಿಶೇಷವಾಗಿ ನೇಮಕ ಮಾಡಿರುವ ನೋಡಲ್ ಅಧಿಕಾರಿಗಳನ್ನು ಹೆಸರಿಸಿದರು. ಜಿಲ್ಲೆಯ ಎಲ್ಲ ಕಾಲೇಜುಗಳಲ್ಲಿ ರೋವರ್-ರೇಂಜರ್ ಯೂನಿಟ್



ಪ್ರಾರಂಭಿಸಲು ಹೇಳಿದರು. ಸ್ಕೌಟ್-ಗೈಡ್ ಯೂನಿಟ್‌ಗಳನ್ನು ಪದವಿ ಪೂರ್ವ ಕಾಲೇಜುಗಳಲ್ಲಿ ಕಡ್ಡಾಯವಾಗಿ ಪ್ರಾರಂಭಿಸುವ ಬಗ್ಗೆ ಸೂಚನೆ ನೀಡಿ, ಪ್ರತಿ ತಾಲ್ಲೂಕುಗಳಲ್ಲಿ ಒಂದು ದಿನದ ತರಬೇತಿಯನ್ನು ನಡೆಸಲು ಸೂಚಿಸಿದರು. ಕರ್ನಾಟಕ ದರ್ಶನದ ಬಗ್ಗೆ ಚರ್ಚಿಸಿದರು. ಕಾರವಾರದ ಕಟ್ಟಡದ ಬಗ್ಗೆ ಚರ್ಚಿಸಲಾಯಿತು. ಎಲ್ಲಾ ಕ್ಷೇತ್ರ ಶಿಕ್ಷಣಾಧಿಕಾರಿಗಳು ಸ್ಕೌಟ್-ಗೈಡ್ ಚಳುವಳಿಯನ್ನು ಬೆಳೆಸಲು ಸಹಕರಿಸಬೇಕೆಂದು ವಿನಂತಿಸಿದರು. ತಾಲ್ಲೂಕುಗಳಲ್ಲಿ ಸ್ಕೌಟ್-ಗೈಡ್ ಕಾರ್ಯಾಲಯಕ್ಕೆ ಕೊಠಡಿಯನ್ನು ನೀಡಬೇಕಾಗಿ ಕೋರಿದರು.

ರಾಜ್ಯ ಸಂಘಟನಾ ಆಯುಕ್ತರಾದ ಶ್ರೀ ಪ್ರಭಾಕರ್ ಭಟ್ ರವರು ಸ್ಕೌಟ್-ಗೈಡ್ ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿಗಳು ಮತ್ತು ಜಿಲ್ಲಾ ಕಾರ್ಯದರ್ಶಿಗಳು ಚಳುವಳಿಯ ಬೆಳವಣಿಗೆಯ ಬಗ್ಗೆ ಚರ್ಚಿಸಬೇಕೆಂದು ವಿನಂತಿಸಿದರು.

## ಕೋಲಾರ

ನವೆಂಬರ್ 21 ರಂದು ಅಂತರ್ ರಾಷ್ಟ್ರೀಯ ಶಾಂತಿ ದಿನದ ಅಂಗವಾಗಿ ನಗರದ ಪ್ರಮುಖ ಬೀದಿಗಳಲ್ಲಿ "ನಾವು ಶಾಂತಿ ದೂತರು" ಎಂಬ ಸಂದೇಶದ ಭಿತ್ತಿಪತ್ರಗಳನ್ನು ಹಿಡಿದು ಸಾರ್ವಜನಿಕರಲ್ಲಿ ಶಾಂತಿಯ ಸಂದೇಶವನ್ನು ಸಾರಲಾಯಿತು. ಈ ದಿನದ ನೆನಪಿಗಾಗಿ ನಗರದ ರೈಲ್ವೇ ನಿಲ್ದಾಣದ ಸ್ವಚ್ಛತಾ ಕಾರ್ಯ ಮಾಡಲಾಯಿತು.

* ಪರಿಸರ ಸಂರಕ್ಷಣೆಯಲ್ಲಿ ಎಲ್ಲರೂ ಭಾಗವಹಿಸಿದಾಗ ಮಾತ್ರ ಹಸಿರು ಪರಿಸರ ನಿರ್ಮಾಣ ಮಾಡಲು ಸಾಧ್ಯ, ಸರ್ಕಾರದ ಜೊತೆಗೆ ಸಾರ್ವನಿಕರು ಹಾಗೂ ಸಂಘ ಸಂಸ್ಥೆಗಳು ಕೈ ಜೋಡಿಸಿದಾಗ ಯಾವುದೇ ಕೆಲಸ ಅಸಾಧ್ಯವಲ್ಲಾ ಎಂದು ಹುನ್ಕುಂದಾ ಶಾಲೆಯ ಎಸ್.ಎಡಿ.ಎಂ.ಸಿ. ಅಧ್ಯಕ್ಷರಾದ ಶ್ರೀ ಶಂಕರಪ್ಪ ರವರು ತಿಳಿಸಿದರು.



ನವೆಂಬರ್ 27 ರಂದು ಕೋಲಾರ ತಾಲೂಕಿನ ಪಟ್ನ ಸಮೀಪದ ಸರ್ಕಾರಿ ಹುನ್ಕಂದ ಹಿರಿಯ ಪ್ರಾಥಮಿಕ ಶಾಲಾ ಆವರಣದಲ್ಲಿ ಬೆಂಗಳೂರಿನ ಇಂಗರ್‌ಸೋನ್ ರ್‍ಯಾಂಡ್ ಕಂಪನಿ, ಅರಣ್ಯ ಇಲಾಖೆ ಮತ್ತು ಭಾರತ್ ಸ್ಕೌಟ್ಸ್-ಗೈಡ್ಸ್ ಸಂಸ್ಥೆಯ ಆಶ್ರಯದಲ್ಲಿ ನಡೆದ ಗಿಡ ನೆಡುವ ಕಾರ್ಯಕ್ಕೆ ಚಾಲನೆ ನೀಡಿ ಮಾತನಾಡಿದರು.

ಇಂಗರ್ ಸೋನ್ ರ್‍ಯಾಂಡ್ ಕಂಪನಿಯ ತಂಡದ ನಾಯಕರಾದ ಶ್ರೀ ನಾಗನಾಥನ್ ರವರು ಮಾತನಾಡಿ ನಮ್ಮ ಸಂಸ್ಥೆ ಸಮಾಜದ ಪ್ರಗತಿಗೆ ಉತ್ತಮವಾದ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಿದ್ದು ನಮ್ಮ ಸಂಸ್ಥೆ ಶಾಲೆಗಳಲ್ಲಿ ಹಸಿರು ವಾತಾವರಣ, ಶಾಲೆಯ ಮಕ್ಕಳಿಗೆ ಬೇಕಾದ ಕಲಿಕಾ ಸಾಮಾಗ್ರಿಗಳು ಹಾಗೂ ಮೂಲಭೂತ ಸೌಕರ್ಯಗಳನ್ನು ಒದಗಿಸುತ್ತಾ ಬಂದಿದ್ದೇವೆ ಈ ಸದಕಾಶವನ್ನು ಮಕ್ಕಳು ಹಾಗೂ ಸಾರ್ವಜನಿಕರು ಸದುಪಯೋಗಪಡಿಸಿಕೊಂಡು ಶೈಕ್ಷಣಿಕವಾಗಿ ಉತ್ತಮ ಸಾಧನೆಯನ್ನು ಮಾಡಬೇಕು ಎಂದು ತಿಳಿಸಿದರು.

ಜಿಲ್ಲಾ ಸಂಘಟನಾ ಆಯುಕ್ತ ಶ್ರೀ ವಿ. ಬಾಬು ರವರು ಮಾತನಾಡಿ ನಮ್ಮ ಸಂಸ್ಥೆ ಸೇವೆಗೆ ಹೆಸರಾಗಿದ್ದು ಜಿಲ್ಲೆಯನ್ನು ಹಸಿರು ಜಿಲ್ಲೆಯನ್ನಾಗಿಸಲು ಸರ್ಕಾರಿ ಕಛೇರಿ, ಶಾಲಾ



ಆವರಣ ಮುಂತಾದ ಸ್ಥಳಗಳಲ್ಲಿ ಅರಣ್ಯ ಇಲಾಖೆಯ ಸಹಕಾರದಿಂದ ಗಿಡನೆಡುವ ಕಾರ್ಯಕ್ರಮಗಳನ್ನು ಮಾಡುತ್ತಾ ಬಂದಿದೆ. ಸಾರ್ವಜನಿಕರು ಉತ್ತಮವಾದ ಸಹಕಾರ ನೀಡಬೇಕು ಎಂದರು.

ಈ ಸಂದರ್ಭದಲ್ಲಿ ಶಾಲಾ ಮುಖ್ಯ ಶಿಕ್ಷಕಿ ಶ್ರೀಮತಿ ವನಿತಾ ಕುಮಾರಿ, ಬೆಂಗಳೂರಿನ ಶ್ರೀಮತಿ ಐರಿನ್ ರಾಜು, ಮುಂತಾದವರು ಭಾಗವಹಿಸಿದ್ದರು.

* ಅಕ್ಟೋಬರ್ 2ರಂದು ಕೋಲಾರ ಜಿಲ್ಲಾ ಸಂಸ್ಥೆ ಮತ್ತು ಕೋಲಾರ ಮಹಿಳಾ ಕಾಲೇಜುಗಳ ಸಂಯುಕ್ತಾಶ್ರಯದಲ್ಲಿ ಗಾಂಧಿ ಜಯಂತಿಯನ್ನು ಆಚರಿಸಲಾಯಿತು. ಈ ಸಮಾರಂಭದಲ್ಲಿ ಜಿಲ್ಲಾ, ಸ್ಥಳೀಯ ಹಾಗೂ ಕಾಲೇಜಿನ ಸಿಬ್ಬಂದಿಗಳು ಭಾಗವಹಿಸಿ ಶ್ರಮದಾನ ಮಾಡಿ ಕಾಲೇಜಿನ ಆವರಣವನ್ನು ಸ್ವಚ್ಛಮಾಡಿ ಗಿಡನೆಡಲಾಯಿತು.




* ಅಂತರ್‌ರಾಷ್ಟ್ರೀಯ ಸೇವಾ ಸಂಸ್ಥೆ ಸದಸ್ಯರಾದ ರೋವರ್ಸ್-ರೇಂಜರ್ಸ್‌ಗಳು ನಿಸ್ವಾರ್ಥ ಸೇವೆ ಸಲ್ಲಿಸುತ್ತಿರುವುದು ಶ್ಲಾಘನೀಯವಾದದ್ದು ಇಂತಹ ಸೇವಾ ಸಂಸ್ಥೆಯಲ್ಲಿ ಸದಸ್ಯತ್ವ ಸಿಕ್ಕಿರುವುದು ಅದೃಷ್ಟ ಇದನ್ನು ಸದುಪಯೋಗಪಡಿಸಿಕೊಂಡು ನಿಮ್ಮ ಜೀವನದಲ್ಲಿ ಉತ್ತುಂಗ ಶಿಖರಕ್ಕೆ ಏರಬೇಕು ಎಂದು ಕೋಲಾರ ಜಿಲ್ಲಾ ರೇಷ್ಮೇ ಇಲಾಖೆಯುಸಹಾಯುಕ ನಿರ್ದೇಶಕರಾದ ಶ್ರೀ ಮಂಜುನಾಥ ರವರು ಕರೆನೀಡಿದರು.

* ಅಕ್ಟೋಬರ್ 6 ರಂದು ಭಾರತ್ ಸ್ಕೌಟ್ಸ್-ಗೈಡ್ಸ್, ಕೋಲಾರ ಜಿಲ್ಲಾ ಸಂಸ್ಥೆ ವತಿಯಿಂದ ಜಿಲ್ಲಾ ರೇಷ್ಮೇ ಇಲಾಖೆಯ ಆವರಣದಲ್ಲಿ ನಡೆಯುತ್ತಿರುವ ಮೂರು ದಿನಗಳ ನಿಪುಣ್ ತರಬೇತಿ ಶಿಬಿರದ ಉದ್ಘಾಟನಾ ಸಮಾರಂಭದಲ್ಲಿ ಗಿಡಕ್ಕೆ ನೀರನ್ನು ಹಾಕುವ ಮೂಲಕ ಚಾಲನೆ ನೀಡಿ ಮಾತನಾಡಿದರು. ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಕೆ.ವಿ. ಶಂಕರಪ್ಪನವರು ಮಾತನಾಡಿ "ಸ್ಕೌಟ್ಸ್-ಗೈಡ್ಸ್ ಸಂಸ್ಥೆ ದೇಶಭಕ್ತರನ್ನು ಹಾಗೂ ಉತ್ತಮ

ಸಮಾಜ ಸೇವಕನನ್ನು ತಯಾರುಮಾಡುತ್ತಿದ್ದು ಇಂದಿನ ಯುವಪೀಳಿಗೆ ಈ ಚಳುವಳಿಯಲ್ಲಿ ಸೇರಿ ತಮ್ಮ ಜೀವನವನ್ನು ಉತ್ತಮಗೊಳಿಸಬೇಕು ಎಂದು ನುಡಿದರು.

ಜಿಲ್ಲಾ ಆಯುಕ್ತೆ ಶ್ರೀಮತಿ ಕೆ. ಆರ್. ಜಯಶ್ರೀ ಮಾತನಾಡಿ ಶಿಬಿರಗಳಿಂದ ತಮ್ಮಲ್ಲಿನ ಅಭಿರುಚಿ, ಹವ್ಯಾಸಗಳು, ಚಿಂತನೆಗಳು ಹಾಗೂ ಸಾಮಾಜಿಕ ಕಳಕಳಿಯ ವಿಚಾರಗಳನ್ನು ಮುಕ್ತವಾಗಿ ಚರ್ಚಿಸಲು ಅವಕಾಶವಿದ್ದು ಈ ಶಿಬಿರಗಳು ನಿಮ್ಮಲ್ಲಿರುವ ಉತ್ತಮ ಪ್ರತಿಭೆಗಳನ್ನು ಗುರುತಿಸಿ ಪೋಷಿಸಲು ಸಹಕಾರಿಯಾಗಿದ್ದು ಸಮಾಜದ ಪ್ರತಿಯೊಬ್ಬರೂ ಈ ಸಂಸ್ಥೆಯ ಶಿಬಿರಗಳಲ್ಲಿ ಭಾಗವಹಿಸಬೇಕು ಎಂದು ತಿಳಿಸಿದರು. ಈ ಸಂದರ್ಭದಲ್ಲಿ ಸಹಾಯಕ ನಿರ್ದೇಶಕರಾದ ಶ್ರೀಮತಿ ಕಲಾವತಿ, ಜಿಲ್ಲಾ ಪದಾಧಿಕಾರಿಗಳು ಭಾಗವಹಿಸಿದ್ದರು.

## ಮೈಸೂರು

On the occasion of Gandhi Jayanthi, the Rovers and Rangers of Govt. First Grade College, Sargur conducted a programme of cleaning of all the class rooms and college premises in the presence of Dr. Narasimhamurthy M.S. Principal on October 4th. Other students also joined their hands to the Abhiyana.



* ಸೆಪ್ಟೆಂಬರ್ 21 ರಂದು ಮೈಸೂರು ಜಿಲ್ಲಾ ಭಾರತ್ ಸ್ಕೌಟ್ಸ್-ಗೈಡ್ಸ್ ಸಂಸ್ಥೆಯ ವತಿಯಿಂದ ವಿಶ್ವಶಾಂತಿ ದಿನಾಚರಣೆ ಅಂಗವಾಗಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿತ್ತು.

ಬೆಳಗ್ಗೆ 9 ಗಂಟೆಗೆ ಮೈಸೂರು ಅರಮನೆಯ ಮುಂಬಾಗವಿರುವ ಶ್ರೀ ಕೋಟೆ ಆಂಜನೇಯಸ್ವಾಮಿ ದೇವಸ್ಥಾನದಿಂದ ಶಾಂತಿ ಮೆರವಣಿಗೆಯನ್ನು ಹಮ್ಮಿಕೊಳ್ಳಲಾಗಿತ್ತು. ಈ ಶಾಂತಿ ಮೆರವಣಿಗೆಯಲ್ಲಿ 108 ಸ್ಕೌಟ್ಸ್-ಗೈಡ್ಸ್, ರೋವರ್ಸ್-ರೇಂಜರ್ಸ್, ಸ್ಕೌಟರ್ಸ್-ಗೈಡರ್ಸ್ ಭಾಗವಹಿಸಿದ್ದರು. ಶ್ರೀ ಅಬ್ದುಲ್ ಜಮೀಲ್, ಜಿಲ್ಲಾ ಕಾರ್ಯದರ್ಶಿಗಳು ಶಾಂತಿ ಮೆರವಣಿಗೆಯನ್ನು ಉದ್ಘಾಟಿಸಿದರು. ಈ ಮೆರವಣಿಗೆಯು ವಾಸವಿ ವೃತ್ತ, ಡಿ. ದೇವರಾಜ ಅರಸ್ ರಸ್ತೆ, ಮೆಟ್ರೋಪಲ್ ವೃತ್ತ, ಹುಣಸೂರು ರಸ್ತೆ ಮೂಲಕ ಶ್ರೀ ಜಯಚಾಮರಾಜೇಂದ್ರ ಸ್ಕೌಟ್ಸ್-ಗೈಡ್ಸ್ ಕೇಂದ್ರ ಕಛೇರಿ ಮೈಸೂರಿನಲ್ಲಿ ಮುಕ್ತಾಯವಾಯಿತು.

ಬೆಳಗ್ಗೆ 10.30 ಕ್ಕೆ ಜಿಲ್ಲಾ ಸಂಸ್ಥೆಯಲ್ಲಿ ಸರ್ವಧರ್ಮ ಪ್ರಾರ್ಥನೆಯನ್ನು ಆಯೋಜಿಸಲಾಗಿತ್ತು. ಶ್ರೀ ಶ್ರೀನಿ ನಾಯಕ್, ಸಹಾಯಕ ಪ್ರಾಧ್ಯಾಪಕರು, ಅರ್ಥಶಾಸ್ತ್ರ ವಿಭಾಗ ಮತ್ತು ರೋವರ್ ಸ್ಕೌಟ್ ಲೀಡರ್, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಸಿದ್ಧಾರ್ಥ ನಗರ, ಮೈಸೂರು ರವರು ಮುಖ್ಯ ಅತಿಥಿಗಳಾಗಿ ಆಗಮಿಸಿದ್ದರು. ವಿಶ್ವಶಾಂತಿ ದಿನಾಚರಣೆಯ ಮಹತ್ವವನ್ನು ತಿಳಿಸಿ, ಇಂದಿನ ದಿನದಲ್ಲಿ ಯುವಜನತೆ ಶಾಂತಿ ಮತ್ತು ಸಹಬಾಳ್ವೆಯಿಂದ ಬಾಳಲು ಸ್ಕೌಟ್ಸ್-ಗೈಡ್ಸ್ ಸಂಸ್ಥೆಯು ಸ್ಫೂರ್ತಿದಾಯಕವಾಗಿದೆ ಎಂದು ತಿಳಿಸಿದರು. ಶ್ರೀ ಅಬ್ದುಲ್ ಜಮೀಲ್ ಜಿಲ್ಲಾ ಕಾರ್ಯದರ್ಶಿಗಳು ಸಭೆಯ ಅಧ್ಯಕ್ಷತೆಯನ್ನು ವಹಿಸಿದ್ದರು.

ಶ್ರೀಮತಿ ಎಸ್. ಸುಜಯಾ, ಜಿಲ್ಲಾ ಜಂಟಿ ಕಾರ್ಯದರ್ಶಿಗಳು, ಶ್ರೀ ಎಂ.ಎನ್. ಸುರೇಶ್ ಕುಮಾರ್ ಜಿಲ್ಲಾ ಸ್ಥಾನಿಕ ಆಯುಕ್ತರು (ಸ್ಕೌಟ್ಸ್) ಶ್ರೀಮತಿ ಮನೋಹರ ಪ್ರಭ ಜಿಲ್ಲಾ ತರಬೇತಿ ಆಯುಕ್ತರು(ಗೈಡ್ಸ್) ಶ್ರೀ ಶ್ರೀರಾಮ್, ಕಾರ್ಯದರ್ಶಿಗಳು, ಶ್ರೀ ಶ್ರೀರಾಮ್, ಕಾರ್ಯದರ್ಶಿಗಳು, ಶ್ರೀರಾಂಪುರ ಸ್ಥಳೀಯ ಸಂಸ್ಥೆ, ಮೈಸೂರು ರವರುಗಳು ಈ ಕಾರ್ಯಕ್ರಮಗಳಲ್ಲಿ ಉಪಸ್ಥಿತರಿದ್ದರು.

ಡಾ. ಅಜಯ್ ಕುಮಾರ್ ಜೈನ್, ಜಿಲ್ಲಾ ಸ್ಥಾನಿಕ ಆಯುಕ್ತರು (ಸ್ಕೌಟ್ಸ್) ಮತ್ತು ಶ್ರೀ ಕೆ. ರಾಮಪ್ರಸಾದ್, ಜಿಲ್ಲಾ ಸಂಘಟಕರು ಕಾರ್ಯಕ್ರಮವನ್ನು ಸಂಘಟಿಸಿದರು.

ಸಂಜೆ 6 ಗಂಟೆಗೆ ಭಾರತ್ ಸ್ಕೌಟ್ಸ್-ಗೈಡ್ಸ್, ಜಿಲ್ಲಾ ಸಂಸ್ಥೆಯ ಪ್ರಗತಿ ಗೈಡ್ ಗುಂಪು ಮತ್ತು ಪ್ಯಾರಡೈಸ್ ಸ್ಕೌಟ್ ಗುಂಪಿನ ಸ್ಕೌಟ್ಸ್-ಗೈಡ್ಸ್, ಸ್ಕೌಟರ್ಸ್-ಗೈಡರ್ಸ್ ರವರು ಪ್ರಗತಿ ಪ್ರತಿಷ್ಠಾನದವರು ವಿಶ್ವಶಾಂತಿ ದಿನಾಚರಣೆ ಅಂಗವಾಗಿ ಮೈಸೂರಿನ ವಾಸವಿ ವೃತ್ತದಲ್ಲಿ ನಡೆಸಿಜ ಜ್ಯೋತಿ ಬೆಳಗಿಸುವ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು.

* ಬಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಜಿಲ್ಲಾ ಸಂಸ್ಥೆ, ಮೈಸೂರು, ಪ್ರಗತಿ ಪ್ರತಿಷ್ಠಾನ, ಮೈಸೂರು ರವರ ಸಹಯೋಗದೊಂದಿಗೆ ಅಕ್ಟೋಬರ್ 10 ರಿಂದ 19ರ ವರಗೆ 10 ದಿನಗಳು ನಡೆದ ವಿಶ್ವ ವಿಖ್ಯಾತ, ನಾಡ ಹಬ್ಬ ಮೈಸೂರು ದಸರಾ ಹಬ್ಬದ ಸಂದರ್ಭದಲ್ಲಿ ಮೈಸೂರಿಗೆ ಆಗಮಿಸುವ ಪ್ರವಾಸಿಗರು ಹಾಗು ಸಾರ್ವಜನಿಕರಿಗೆ ನಗರದ ಹೃದಯ ಭಾಗವಾದ ಕೆ.ಆರ್ ವೃತ್ತದಲ್ಲಿ ಉಚಿತವಾಗಿ ಕುಡಿಯುವ ನೀರಿನ ವ್ಯವಸ್ಥೆಯನ್ನು ಮಾಡಲಾಗಿತ್ತು.

ಈ ಕಾರ್ಯಕ್ರಮದ ಉದ್ಘಾಟನೆಯನ್ನು ಶ್ರೀ ಪಿ.ವಿಶ್ವನಾಥ್, ಜಿಲ್ಲಾ ಪ್ರಧಾನ ಆಯುಕ್ತರು ರವರು ನೆರವೇರಿಸಿದರು. ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು ಈ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು. ಈ ಕಾರ್ಯಕ್ರಮ ಡಾ. ಬಿ.ಕೆ.ಅಜಯ್ ಕುಮಾರ್ ಜೈನ್,ಜಿಲ್ಲಾ ಸ್ಥಾನಿಕ ಆಯುಕ್ತರು ರವರ ನೇತೃತ್ವದಲ್ಲಿ ನೆರವೇರಿತು.



* ಅಕ್ಟೋಬರ್ 19ರಂದು ಮೈಸೂರಿನ ಪ್ರಖ್ಯಾತ ದಸರಾ ಜಂಬೂಸವಾರಿ ಮತ್ತು ಪಂಜಿನ ಕವಾಯಿತಿನಲ್ಲಿ ಜಿಲ್ಲೆಯ 70 ಸ್ಕೌಟ್ಸ್, ಗೈಡ್ಸ್, ರೋವರ್ಸ್ ಮತ್ತು ರೇಂಜರ್ಸ್‌ಗಳು ಭಾಗವಹಿಸಿದ್ದರು.

ಸ್ಕೌಟ್ಸ್ ಮತ್ತು ರೋವರ್ ವಿಭಾಗದ ನಾಯಕತ್ವ ವನ್ನು ಕುಮಾರ. ಸುಖೇಶ್ ಮತ್ತು ಗೈಡ್ಸ್ ಮತ್ತು ರೇಂಜರ್ ವಿಭಾಗದ ನಾಯಕತ್ವ ವನ್ನು ಕುಮಾರಿ. ಪ್ರಮೀಳ ರವರು ವಹಿಸಿದ್ದರು.



## ರಾಯಚೂರು

ಸೆಪ್ಟೆಂಬರ್ 22 ರಂದು ಮಸ್ಕಿ ನೂತನ ತಾಲೂಕಿನ ಜೋಗಿನ ರಾಮಣ್ಣ ಸ್ಮಾರಕ ಶಾಲೆಯಲ್ಲಿ ಅಂತರಾಷ್ಟ್ರೀಯ ಶಾಂತಿ ದಿನಾಚರಣೆ ಹಾಗೂ ಮಸ್ಕಿ ಸ್ಥಳೀಯ ಸಂಸ್ಥೆಯ ಉದ್ಘಾಟನಾ ಸಮಾರಂಭವನ್ನು ಹಮ್ಮಿಕೊಳ್ಳಲಾಯಿತು. ಡಾ॥ ಹೆಚ್.ಬಿ. ಭರಶೆಟ್ಟಿ, ಜಿಲ್ಲಾ ಕಾರ್ಯದರ್ಶಿಗಳು, ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ, ಬೀದರ ಇವರು ಸಸಿಗೆ ನೀರು ಉಣಿಸುವುದರ ಮೂಲಕ ಕಾರ್ಯಕ್ರಮಕ್ಕೆ ಚಾಲನೆ ನೀಡಿದರು. ನಂತರ ಅವರು ಮಾತನಾಡಿ, ಸಂಸ್ಥೆಯ ಮೂಲ ಉದ್ದೇಶಗಳನ್ನು ಸ್ಕೌಟ್-ಗೈಡ್‌ಗಳಿಗೆ ತಿಳಿಯಪಡಿಸುವ ಮೂಲಕ ಸಮಾಜಕ್ಕೆ ಇದರ ಬಗ್ಗೆ ಜಾಗೃತಿ ಮೂಡಿಸಲು ನೂತನ ಪದಾಧಿಕಾರಿಗಳಿಗೆ ಸಲಹೆ ನೀಡಿದರು. ಇದೊಂದು ಸ್ವಯಂ ಸೇವಾ ಸಂಸ್ಥೆಯಾಗಿದ್ದು, ರಾಯಚೂರು ಜಿಲ್ಲೆಯಲ್ಲಿ ಈ ಚಳುವಳಿಯು ಹೈ. ಕ. ಜಿಲ್ಲೆಗಳಲ್ಲಿಯೇ ಉತ್ತಮ ಚಟುವಟಿಕೆಗಳ ಮೂಲಕ ಮುಂಚೂಣಿಯಲ್ಲಿದೆ. ಇದನ್ನು ಇದನ್ನು ಇನ್ನೂ ಹೆಚ್ಚಿನ ರೀತಿಯಲ್ಲಿ ಬೆಳೆಸಲು ಸ್ಥಳೀಯ ಸಂಸ್ಥೆಗಳು ಶ್ರಮಿಸಬೇಕು ಎಂದರು.

ಕಾರ್ಯಕ್ರಮದ ಮುಖ್ಯ ಅತಿಥಿಗಳಾಗಿ ಡಾ॥ ಶಿವಶರಣಪ್ಪ ಇತ್ಲಿ, ಜಿಲ್ಲಾ ಸ್ಥಾನಿಕ ಆಯುಕ್ತರು(ಸ್ಕೌ) ಇವರು ಮಾತನಾಡಿ, ಇಂದು ಶಾಂತಿ ದಿನಾಚರಣೆಯ ಮೂಲಕ ನೂತನ ಸ್ಥಳೀಯ ಸಂಸ್ಥೆ ಉದ್ಘಾಟನೆ ಆಗಿರುವುದು ಉತ್ತಮ ಸಂದೇಶ ನೀಡಲಿದೆ ಎಂದರು. ಮಾರ್ಗದರ್ಶಕರಾಗಿ ಭಾಗವಹಿಸಿದ ಶ್ರೀ ರಾವುತರಾವ್ ಬರೂರ, ಮಾಜಿ ಜಿಲ್ಲಾ ಸಂಘಟನಾ ಆಯುಕ್ತರು ಮಾತನಾಡಿ, ಸಂಸ್ಥೆಯ ಧ್ಯೇಯೋದ್ದೇಶಗಳನ್ನು ಅರಿತು ಸ್ವಯಂ ಪ್ರೇರಿತರಾಗಿ ಸೇವೆ ಮಾಡುವ ಮನೋವೃತ್ತಿಯನ್ನು ಹೊಂದಿರುವವರು ಮಾತ್ರ ಈ ಸಂಸ್ಥೆಗೆ ದುಡಿಯುತ್ತಿದ್ದಾರೆ. ಅದೇ ರೀತಿಯಲ್ಲಿ ನೂತನವಾಗಿ ಆಯ್ಕೆಯಾದ ಎಲ್ಲ ಪದಾಧಿಕಾರಿಗಳು ಸ್ಕೌಟ್ಸ್-ಗೈಡ್ಸ್‌ಗಳು ಹಾಗೂ ಸಮಾಜದ ಹಿತದೃಷ್ಟಿಯಿಂದ ಸ್ಕೌಟ್ಸ್ ಚಟುವಟಿಕೆಗಳನ್ನು ಹಮ್ಮಿಕೊಳ್ಳುವಂತೆ ಸಲಹೆ ನೀಡಿದರು. ಕಾರ್ಯಕ್ರಮದ ಮುಖ್ಯ ಅತಿಥಿಗಳಾಗಿ ಶ್ರೀಮತಿ ಅಜೀಜಾ ಸುಲ್ತಾನ, ಜಿಲ್ಲಾ ತರಬೇತಿ ಆಯುಕ್ತರು ಮಾತನಾಡಿ, ಸಂಸ್ಥೆಯ ಚಟುವಟಿಕೆಗಳು ಹೆಚ್ಚಿಸಲು ಇಂಥ ಸ್ಥಳೀಯ ಸಂಸ್ಥೆಗಳು ರಚನೆಯಾಗಿರುವುದು ನನಗೆ ಸಂತೋಷ ತಂದಿದೆ ಎಂದರು.



ಕಾರ್ಯಕ್ರಮದ ಅಧ್ಯಕ್ಷತೆಯನ್ನು ಡಾ॥ ಮಲ್ಲಿಕಾರ್ಜುನ್ ಇತ್ಲಿ, ಇವರು ವಹಿಸಿದ್ದರು. ಈ ಸಂದರ್ಭದಲ್ಲಿ ಸ್ಥಳೀಯ ಸಂಸ್ಥೆಯ ಎಲ್ಲ ಪದಾಧಿಕಾರಿಗಳು ಭಾಗವಹಿಸಿದ್ದರು. ಶ್ರೀ ಶಿವಪ್ಪ ಹೆಚ್. ಕಾರ್ಯದರ್ಶಿಗಳು ಪ್ರಾಸ್ತಾವಿಕವಾಗಿ ಮಾತನಾಡಿದರು. ಶ್ರೀ ಶಶಿಕಾಂತರಾವ್ ದೇಸಾಯಿ ಸ್ಕೌಟ್ ಮಾಸ್ಟರ್ ಇವರು ಸ್ವಾಗತಿಸಿದರು. ಶ್ರೀ ಶ್ರೀನಿವಾಸರಾವ್ ಸ್ಕೌ.ಮಾ. ವಂದಿಸಿದರು.

* ಸೆಪ್ಟೆಂಬರ್ 21 ರಂದು ರಾಯಚೂರು ಜಿಲ್ಲೆ, ರಾಯಚೂರು ತಾಲೂಕಿನ ದಿನ್ನಿ ಶಾಲೆಯ ಡಾ॥ ಸಂಗಮೇಶ್ವರ ಸರ್ದಾರ್ ಸ್ಕೌಟ್ ಘಟಕ ಹಾಗೂ ಎಸ್.ಕೆ. ಪ್ರಭ ಗೈಡ್ ಕಂಪನಿ ವತಿಯಿಂದ "ಅಂತರ ರಾಷ್ಟ್ರೀಯ ಶಾಂತಿ ದಿನ"ವನ್ನು ಆಚರಿಸಲಾಯಿತು. ಕಾರ್ಯಕ್ರಮದಲ್ಲಿ "ಶಾಂತಿ"ಯ ವಿಷಯವಾಗಿ ಶ್ರೀಮತಿ ವೈಶಾಲಿ ಪಾಟೀಲ್ ಇವರು ಮಾತನಾಡಿ, ಜಗತ್ತಿನಲ್ಲಿ ಅತೀ ಜಾಣವಾದ ಪ್ರಾಣಿಗಳಲ್ಲಿ ಒಂದಾದ ಪ್ರಾಣಿ ಎಂದರೆ ಮನುಷ್ಯಪ್ರಾಣಿ ಎಂದು ಹೇಳುತ್ತೇವೆ. ಮನುಷ್ಯನ ಬಾಹ್ಯ ಶೃಂಗಾರಕ್ಕಿಂತ ಆಂತರಿಕ ಶೃಂಗಾರವು ಶಾಶ್ವತವಾದದ್ದು. ಆಂತರಿಕ ಶೃಂಗಾರ ನಮಗೂ ಮತ್ತು ಸಮಾಜಕ್ಕೂ ಹಿತಕರ ಎಂದರು.

ಕಾರ್ಯಕ್ರಮದಲ್ಲಿ ಪ್ರಾಸ್ತಾವಿಕವಾಗಿ ಶ್ರೀ ರಾವುತರಾವ್ ಬರೂರ, ಸ್ಕೌಟ್ ಮಾಸ್ಟರ್ ಮಾತನಾಡಿದರು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ಶ್ರೀಮತಿ ಶರಣಮ್ಮ ಮುಖ್ಯಗುರುಗಳು ವಹಿಸಿ ಮಾತನಾಡಿ ಇವತ್ತಿನ ಜಗತ್ತಿನಲ್ಲಿ ಬಹಳಷ್ಟು ಅಶಾಂತತೆ ತಾಂಡವಾಡುತ್ತಿರುವ ದಿನಗಳಲ್ಲಿ ನಾವುಗಳು ಶಾಂತತೆಯನ್ನು

## ಶಿರಸಿ

**Ave Mariya Scout Troop** of Sirsi District conducted one day Health and Yoga camp on 15th October. National Level Yoga Refree Sri Prashanth Bhat was the leader of the camp. Under his guidance Scouts practiced several asanas and realized the importance of Health. Sri Prashanth Bhat also asked the students not to waste the food and eat healthy food. Scout Master Sri Kiran Fernandis organized camp.



## ಉಡುಪಿ

ಗಾಂಧಿ ಜಯಂತಿ ಪ್ರಯುಕ್ತ ಉಡುಪಿ ರೈಲು ನಿಲ್ದಾಣದಲ್ಲಿ ಸರ್ವಧರ್ಮ ಪ್ರಾರ್ಥನೆ ಹಾಗೂ ಸ್ವಚ್ಛತಾ ಕಾರ್ಯಕ್ರಮವು ನಡೆಸಲಾಯಿತು. ಜಿಲ್ಲಾ ಸ್ಕೌಟ್ ಆಯುಕ್ತರಾದ ಡಾ॥ ವಿಜಯೇಂದ್ರ ರಾವ್, ಗೈಡ್ಸ್ ಆಯುಕ್ತರಾದ ಶ್ರೀಮತಿ ಜ್ಯೋತಿ ಜೆ. ಪೈ. ಜಿಲ್ಲಾ ತರಬೇತಿ ಆಯುಕ್ತರು(ಗೈಡ್ಸ್) ಶ್ರೀಮತಿ ಸಾವಿತ್ರಿ ಮನೋಹರ್, ರೈಲ್ವೆ ಪದಾಧಿಕಾರಿಗಳು ಹಾಗೂ ಸಿಬ್ಬಂದಿ ವರ್ಗದವರು ಭಾಗವಹಿಸಿದ್ದರು.



ಜಿಲ್ಲಾ ಸಂಘಟಕರಾದ ಶ್ರೀಮತಿ ಸುಮನ್ ಶೇಖರ್, ಶ್ರೀ ನಿತಿನ್ ಅಮಿನ್ ಕಾರ್ಯಕ್ರಮ ಸಂಘಟಿಸಿದರು. ಕಾರ್ಯಕ್ರಮದಲ್ಲಿ 50 ಸ್ಕೌಟ್ಸ್–ಗೈಡ್ಸ್, ಕಬ್–ಬುಲ್‌ಬುಲ್ಸ್‌ಗಳು ಭಾಗವಹಿಸಿದ್ದರು.

## ವಿಜಯಪುರ

ಆಗಸ್ಟ್ 30 ರಿಂದ 31 ರ ವರೆಗೆ ವಿಜಯಪುರ ಜಿಲ್ಲಾ ಮಟ್ಟದ ಫ್ರೀ ಬಿಯಿಂಗ್ ಮಿ ತರಬೇತುದಾರರ ಕಾರ್ಯಾಗಾರವನ್ನು ದಿ॥ ವಾಸಂತಿಬಾಯಿ ಜಿಗಜಿನಿ ಜಿಲ್ಲಾ ಸ್ಕೌಟ್ಸ್–ಗೈಡ್ಸ್ ತರಬೇತಿ ಮತ್ತು ಶಿಬಿರ ಕೇಂದ್ರ ಬುರಣಾಪುರ ಇಲ್ಲಿ ದಕ್ಷಿಣ ಪ್ರಾಂತೀಯ ಅನುದಾನದಲ್ಲಿ ಜರುಗಿಸಲಾಯಿತು. ಸದರಿ ಶಿಬಿರದಲ್ಲಿ ಒಟ್ಟು 40 ಸ್ಕೌಟರ್–ಗೈಡರ್‌ಗಳು ಶಿಬಿರಾರ್ಥಿಗಳಾಗಿ ಪಾಲ್ಗೊಂಡಿದ್ದರು. ಶ್ರೀ ಬಿ.ಎನ್. ವಿನಯ್ ಕುಮಾರ್ ಹಾಗೂ ಶ್ರೀ ನಾಗೇಶ್ ಶಿವಪೂರ್ ಅವರು ಸಂಪನ್ಮೂಲ ವ್ಯಕ್ತಿಗಳಾಗಿ ಕಾರ್ಯ ನಿರ್ವಹಿಸಿದರು. ಆಗಸ್ಟ್ 31 ರಂದು ಶ್ರೀ ಎಸ್.ಎಸ್. ಬೊಮ್ಮನಹಳ್ಳಿ, ಜಿಲ್ಲಾ ಕಾರ್ಯದರ್ಶಿಗಳು ಸಸಿಗೆ ನೀರೆರೆಯುವ ಮೂಲಕ ಶಿಬಿರವನ್ನು ಉದ್ಘಾಟಿಸಿದರು. ಅರ್ಹರಾದ ಎಲ್ಲ ಶಿಬಿರಾರ್ಥಿಗಳಿಗೆ ಅರ್ಹತಾ ಪ್ರಮಾಣ ಪತ್ರಗಳನ್ನು ಹಾಗೂ ಪದಕಗಳನ್ನು ಶ್ರೀ ಪಿ.ಎಸ್. ಕುಂಬಾರ, ಮಾಜಿ ಜಿಲ್ಲಾ ಕಾರ್ಯದರ್ಶಿಗಳು ಹಾಗೂ ಶ್ರೀ ಎಸ್.ಎಸ್. ಬೊಮ್ಮನಹಳ್ಳಿ, ಜಿಲ್ಲಾ ಕಾರ್ಯದರ್ಶಿಗಳು ಹಾಗೂ ಜಿಲ್ಲಾ ಸಂಘಟನಾ ಆಯುಕ್ತರಾದ ಶ್ರೀ ಪ್ರಕಾಶ ಹದ್ಲಿಯವರ ಉಪಸ್ಥಿತಿಯಲ್ಲಿ ಸಂಪನ್ಮೂಲ ವ್ಯಕ್ತಿಗಳು ಪ್ರದಾನ ಮಾಡಿದರು.




* ಸೆಪ್ಟೆಂಬರ್ 30 ರಿಂದ ಅಕ್ಟೋಬರ್ 2 ರ ವರೆಗೆ ನಿಪುಣ್ ಪರೀಕ್ಷಾ ಶಿಬಿರವನ್ನು ದಿ॥ ವಾಸಂತಿಬಾಯಿ ಜಿಗಜಿನ್ನಿ, ಭಾರತ್ ಸ್ಕೌಟ್ಸ್–ಗೈಡ್ಸ್ ಜಿಲ್ಲಾ ತರಬೇತಿ ಮತ್ತು ಶಿಬಿರ ಕೇಂದ್ರ, ಬುರಣಾಪುರ ಇಲ್ಲಿ ಹಮ್ಮಿಕೊಳ್ಳಲಾಗಿತ್ತು. ಪರೀಕ್ಷಾರ್ಥಿಗಳಾಗಿ ಜಿಲ್ಲೆಯ ವಿವಿಧ ಕಾಲೇಜುಗಳಿಂದ ಒಟ್ಟು 44 ರೋವರ್ಸ್ ಭಾಗವಹಿಸಿದ್ದರು.

ಈ ಶಿಬಿರವನ್ನು ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಸಿದ್ದಣ್ಣಾ ಎಂ. ಸಕ್ರಿಯವರು ಸಸಿಗೆ ನೀರೆರೆಯುವುದರ ಮೂಲಕ ಉದ್ಘಾಟಿಸಿದರು. ಕಾರ್ಯಕ್ರಮದಲ್ಲಿ, ಜಿಲ್ಲಾ ಕಾರ್ಯದರ್ಶಿಗಳಾದ ಶ್ರೀ ಎಸ್.ಎಸ್. ಬೊಮ್ಮನಹಳ್ಳಿ, ಜಿಲ್ಲಾ ಸಹಾಯಕ ಕಾರ್ಯದರ್ಶಿ ಶ್ರೀ ಶರಣು ಸಬರದ, ಜಿಲ್ಲಾ ಸಂಘಟಕರಾದ ಶ್ರೀ ಪ್ರಕಾಶ್ ಹದ್ಲಿ, ಹೆಚ್.ಡಬ್ಲ್ಯೂ.ಬಿ.(ಸ್ಕೌಟ್) ಶ್ರೀಮತಿ ಗಂಗೂಬಾಯಿ ಬಿಸನಾಳ ಉಪಸ್ಥಿತರಿದ್ದರು.



ಶ್ರೀ ನಾಗೇಶ್ ಶಿವಪೂರ ಎಲ್.ಟಿ. (ಸ್ಕೌಟ್) ಮತ್ತು ಹೆಚ್.ಡಬ್ಲ್ಯೂ.ಬಿ. (ರೋವರ್) ಇವರು ನಾಯಕರಾಗಿ ಕಾರ್ಯನಿರ್ವಹಿಸಿದರು. ಸಹಾಯಕರಾಗಿ ರೋವರ್ ಶ್ರೀ ಸ್ವಾಮಿ, ಶ್ರೀ ರಾಜಶೇಖರ ಖೇಡಗಿ, ಶ್ರೀ ಶಿವಪ್ಪ ಪಂತೋಜಿ ಹಾಜರಿದ್ದರು.

* ಸೆಪ್ಟೆಂಬರ್ 24 ರಿಂದ 30ರ ವರೆಗೆ ದಿ॥ ವಾಸಂತಿಬಾಯಿ ಜಿಗಜಿನಿ ಜಿಲ್ಲಾ ಸ್ಕೌಟ್ಸ್ ಮತ್ತು ಗೈಡ್ಸ್ ತರಬೇತಿ ಮತ್ತು ಶಿಬಿರ ಕೇಂದ್ರ ಬುರಣಾಪುರ. ಇಲ್ಲಿ ಸ್ಕೌಟ್ ಮಾಸ್ಟರ್, ಗೈಡ್ ಕ್ಯಾಪ್ಟನ್, ಕಬ್ ಮಾಸ್ಟರ್ ಮೂಲ ತರಬೇತಿ ಶಿಬಿರಗಳು ಜರುಗಿದವು. ಶ್ರೀ ಬೊಮ್ಮಯ್ಯ ನಾಯಕ ನಾಯಕತ್ವದಲ್ಲಿ 12 ಶಿಕ್ಷಕ/ಶಿಕ್ಷಕಿಯರು, ಶ್ರೀ ಎಸ್.ಆರ್. ಪಾಟೀಲ ನಾಯಕತ್ವದಲ್ಲಿ 28 ಶಿಕ್ಷಕರು ಶ್ರೀಮತಿ ಕೆ.ವಿ. ಶ್ಯಾಮಲಾ ನಾಯಕತ್ವದಲ್ಲಿ 20 ಶಿಕ್ಷಕಿಯರು ಮೂಲ ತರಬೇತಿ ಪಡೆದರು. ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಸಿದ್ದಣ್ಣ ಎಂ. ಸಕ್ರಿ ರವರ ಅಧ್ಯಕ್ಷತೆಯಲ್ಲಿ, ಮೂಲತರಬೇತಿ ಶಿಬಿರಗಳ ಉದ್ಘಾಟನೆಯನ್ನು ಜಿಲ್ಲಾ ಖಜಾಂಚಿಗಳಾದ ಶ್ರೀ ಸಹಜಾನಂದ. ದಂಧರಗಿ ರವರು ಜ್ಯೋತಿ ಬೆಳಗುವದರೊಂದಿಗೆ ನೆರವೇರಿಸಿ ತರಬೇತಿಯ

ಮಹತ್ವ ಮತ್ತು ಅವಶ್ಯಕತೆ ಕುರಿತು ಮಾತನಾಡಿದರು. ಶ್ರೀ ಎಸ್.ಎಸ್. ಬೊಮ್ಮನಹಳ್ಳಿ, ಜಿಲ್ಲಾ ಕಾರ್ಯದರ್ಶಿಗಳು ಶ್ರೀ ಪ್ರಕಾಶ್ ಹದ್ಲಿ ಜಿಲ್ಲಾ ಸಂಘಟಕರು. ಈ ಸಂದರ್ಭದಲ್ಲಿ ಉಪಸ್ಥಿತರಿದ್ದರು. ಶಿಭಿರಾರ್ಥಿಗಳು ಸೆಪ್ಟೆಂಬರ್ 29 ರಂದು ವನವಿಧ್ಯಾ , ಸಂಕೇತಗಳ ಮೂಲಕ ಹೊರ ಸಂಚಾರ ಕಾರ್ಯಕ್ರಮ ಯಶಸ್ವಿಯಾಗಿ ಪೂರೈಸಿದರು.

ಸೆಪ್ಟೆಂಬರ್ 29 ರಂದು ಸಂಜೆ 4 ಗಂಟೆಗೆ ಶಿಬಿರದ ಸಮಾರೋಪ ಸಮಾರಂಭವು ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಸಿದ್ದಣ್ಣ. ಎಂ. ಸಕ್ರಿ ರವರ ಅಧ್ಯಕ್ಷತೆಯಲ್ಲಿ ಜರುಗಿತು. ಮುಖ್ಯ ಅತಿಥಿಗಳಾಗಿ ಶ್ರೀ ಶರೀಫ್ ನದಾಫ, ಕ್ಷೇತ್ರ ಶಿಕ್ಷಣಾಧಿಕಾರಿಗಳು ವಿಜಯಪುರ ನಗರ, ಶ್ರೀ ಎಸ್.ಬಿ. ಬಿಂಗೇರಿ ಕ್ಷೇತ್ರ ಶಿಕ್ಷಣಾಧಿಕಾರಿಗಳು ಇಂಡಿ ಶ್ರೀ ಸಿ.ಎಂ. ಬಂಡಗಾರ ಕ್ಷೇತ್ರ ಸಮನ್ವನಾಧಿಕಾರಿಗಳು ಇಂಡಿ, ಶ್ರೀ ಗಂಗಶೆಟ್ಟಿ ಪ್ರಭಾರಿ ಜಿಲ್ಲಾ ದೈಹಿಕ ಶಿಕ್ಷಣಾಧಿಕಾರಿಗಳು, ಶ್ರೀ ಎಸ್.ಸಿ. ಶೆಡಶ್ಯಾಳ ಅಧ್ಯಕ್ಷರು, ಜಿಲ್ಲಾ ಸರಕಾರಿ ನೌಕರರ ಸಂಘ ವಿಜಯಪುರ ಇವರುಗಳು ಆಗಮಿಸಿದ್ದರು. ಜಿಲ್ಲಾ ಪದಾಧಿಕಾರಿಗಳಾದ ಶ್ರೀ ಸಹಜಾನಂದ. ದಂದರಗಿ, ಶ್ರೀ ಎಸ್.ಎಸ್. ಬೊಮ್ಮನಹಳ್ಳಿ, ಶ್ರೀ ಶರಣರು ಸಬರದ, ಶ್ರೀ ಪಿ.ಎಸ್. ಕುಂಬಾರ, ಶ್ರೀ ಪ್ರಕಾಶ ಹದ್ಲಿ ಶ್ರೀ ಎಸ್.ಬಿ. ಬಜಂತ್ರಿ, ಎಸ್.ಬಿ. ಪಾಟೀಲ, ಶ್ರೀ ಎಸ್.ಜಿ. ಬಿರಾದಾರ ಇವರುಗಳು ಸಮಾರಂಭದಲ್ಲಿ ಉಪಸ್ಥಿತರಿದ್ದರು.

ರಾತ್ರಿ ಶಿಬಿರಾರ್ಥಿಗಳಿಂದ ಭವ್ಯಶಿಭಿರಾಗ್ನಿ ಕಾರ್ಯಕ್ರಮ ಜರುಗಿತು. ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಸಿದ್ದಣ್ಣ. ಎಂ. ಸಕ್ರಿ, ರವರು ಕಾರ್ಯಕ್ರಮ ಉದ್ಘಾಟಿಸಿದರು.

ಸೆಪ್ಟೆಂಬರ್ 30 ರಂದು ಬೆಳಿಗ್ಗೆ 7 ಗಂಟೆಗೆ "ಸರ್ವಧರ್ಮ ಪ್ರಾರ್ಥನೆ"ಯನ್ನು ಕೈಗೊಳ್ಳಲಾಯಿತು.

## ಶ್ರದ್ಧಾಂಜಲಿ

**ಶ್ರೀ ಶೇಖ್ ಹಸನ್ ಸಾಹೇಬ್** ಹೆಚ್.ಡಬ್ಲ್ಯೂ.ಬಿ. (ಸ್ಕೌ) ಅವರು ದಕ್ಷಿಣ ಕನ್ನಡ ಜಿಲ್ಲೆಯ, ಉಳ್ಳಾಲ ಸ್ಥಳೀಯ ಸಂಸ್ಥೆಯ ಕೋಶಾಧಿಕಾರಿಯಾಗಿ, ತರಬೇತಿ ಸಲಹೆಗಾರರಾಗಿ ಹಾಗೂ ಜಿಲ್ಲಾ ಸಂಘಟನಾ ಆಯುಕ್ತರಾಗಿ ಸೇವೆ ಸಲ್ಲಿಸಿದ್ದರು

ಇವರು ಅಲ್ಪ ಕಾಲದ ಅನಾರೋಗ್ಯದಿಂದ 04 ಅಕ್ಟೋಬರ್ 2018ರಂದು ನಿಧನರಾಗಿರುತ್ತಾರೆಂದು ತಿಳಿಸಲು ವಿಷಾಧಿಸುತ್ತೇವೆ.

ಇವರು ಅಪಾರ ಬಂಧುಗಳು ಮತ್ತು ಸ್ನೇಹಿತರುಗಳನ್ನು ಅಗಲಿದ್ದಾರೆ. ಇವರ ಕುಟುಂಬ ವರ್ಗಕ್ಕೆ ದುಃಖವನ್ನು ಬರಿಸುವ ಶಕ್ತಿಯನ್ನು ನೀಡಲೆಂದು ಭಗವಂತನಲ್ಲಿ ಪ್ರಾರ್ಥಿಸುತ್ತೇವೆ.

**ಶ್ರೀ ಕೆ. ನರಸಿಂಹಯ್ಯ** ನಿವೃತ್ತ ನೌಕರರು, ಭಾರತ್ ಸ್ಕೌಟ್ಸ್ & ಗೈಡ್ಸ್ ಅವರು ಅಕ್ಟೋಬರ್ 22, 2018ರಂದು ಬೆಂಗಳೂರಿನಲ್ಲಿ ನಿಧನರಾದರು.

ಇವರು ಭಾಸ್ಕೌ&ಗೈ ರಾಜ್ಯ ಸಂಸ್ಥೆಯ ಸ್ಕೌಟ್ ವಿಭಾಗದಲ್ಲಿ ಗುಂಪು 'ಡಿ' ನೌಕರರಾಗಿ ಸುಮಾರು 35ವರ್ಷಗಳ ಕಾಲ ಸುಧೀರ್ಘ ಸೇವೆ ಸಲ್ಲಿಸಿ ನಿವೃತ್ತಿ ಹೊಂದಿದ್ದರು.

ಇವರು ಪತ್ನಿ, ಮೂರು ಪುತ್ರರು, ಒಬ್ಬ ಪುತ್ರಿ ಮತ್ತು ಮೊಮ್ಮಕ್ಕಳು ಹಾಗೂ ಅಪಾರ ಬಂಧು-ಬಳಗವನ್ನು ಅಗಲಿದ್ದಾರೆ. ಮೃತರ ಆತ್ಮಕ್ಕೆ ಶಾಂತಿ ಸಿಗಲೆಂದು ಹಾಗೂ ಅವರ ಅಗಲಿಕೆಯ ದುಖಃವನ್ನು ಭರಿಸುವ ಶಕ್ತಿಯನ್ನು ಅವರ ಕುಟುಂಬಕ್ಕೆ ನೀಡಲೆಂದು ಭಗವಂತನಲ್ಲಿ ಪ್ರಾರ್ಥಿಸುತ್ತೇವೆ

- ರಾಜ್ಯ ಕಾರ್ಯದರ್ಶಿ

**ಅಕ್ಟೋಬರ್ 09ರಂದು ಬೆಂಗಳೂರಿನ ಜ್ಞಾನಜ್ಯೋತಿ ಸಭಾಂಗಣದಲ್ಲಿ ಎಸ್.ಎಸ್.ಎಲ್.ಸಿ. ಪ್ರತಿಭಾನ್ವಿತ ಸ್ಕೌಟ್ಸ್-ಗೈಡ್ಸ್, ಹಿರಿಯ ಸ್ಕೌಟರ್ಸ್-ಗೈಡರ್ಸ್, ನಿವೃತ್ತ ನೌಕರರು ಮತ್ತು ಏಷಿಯಾ ಫೆಸಿಫಿಕ್ ಪ್ರಶಸ್ತಿ ಪಡೆದವರನ್ನು ಗೌರವಿಸಿ ಸನ್ಮಾನಿಸಲಾಯಿತು. ಕಾರ್ಯಕ್ರಮದಲ್ಲಿ ನಾಡೋಜ ಡಾ|| ಮಹೇಶ್ ಜೋಶಿ, ಸಹ ಮಹಾನಿರ್ದೇಶಕರು (ನಿ.) ಬೆಂಗಳೂರು ದೂರದರ್ಶನ ಕೇಂದ್ರ ಇವರು ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದರು. ರಾಜ್ಯ ಸಂಸ್ಥೆ ಪದಾಧಿಕಾರಿಗಳು ಚಿತ್ರದಲ್ಲಿದ್ದಾರೆ.**













Regd. as News Paper (Magazine) RNI No: 13348/1959. Postal Regd. No. KA/BGGPO/2580/2018-20
Licensed to Post Without Prepayment License WPP NO. 340, Date of Publishing 28th of Every Month
Posted at: Bengaluru PSO, Mysore Road, Bengaluru-26 on every month of 28th or 30th (No. of Pages: 36)



ದಾವಣಗೆರೆ ಅನ್‌ಮೋಲ್ ಪಬ್ಲಿಕ್ ಶಾಲೆಯ ಸ್ಕೌಟ್-ಗೈಡ್‌ಗಳು "ರೈತ" ಪ್ರಾವೀಣ್ಯತಾ ಪದಕಕ್ಕಾಗಿ ಸಮೀಪದ ಗದ್ದೆಯಲ್ಲಿ ಪ್ರಾಯೋಗಿಕ ಅನುಭವ ಪಡೆದರು.



ಅಕ್ಟೋಬರ್ 23 ರಿಂದ 25ರ ವರೆಗೆ ಬೆಳಗಾವಿ ಜಿಲ್ಲೆ ಕಿತ್ತೂರುನಲ್ಲಿ ಜರುಗಿದ ರಾಣಿಚೆನ್ನಮ್ಮ ಉತ್ಸವದಲ್ಲಿ ಸೇವೆ ಸಲ್ಲಿಸುತ್ತಿರುವ ರೋವರ್ಸ್ ಮತ್ತು ರೇಂಜರ್ಸ್‌ಗಳು.



ಇತ್ತೀಚೆಗೆ ಕೊಡಗು ಜಿಲ್ಲೆ ತಲಕಾವೇರಿಯಲ್ಲಿ ನಡೆದ ತೀರ್ಥೋದ್ಭವ ಕಾರ್ಯಕ್ರಮದಲ್ಲಿ ವಿರಾಜಪೇಟೆ ಸರ್ಕಾರಿ ಪ್ರಥಮದರ್ಜೆ ಕಾಲೇಜಿನ ರೋವರ್ಸ್‌ಗಳು ಸೇವೆ ಸಲ್ಲಿಸುತ್ತಿರುವುದು.



ಬೆಂಗಳೂರು ಉತ್ತರ ಜಿಲ್ಲೆ ಯಲಹಂಕ ಎಂ.ಇ.ಸಿ. ಶಾಲೆಯ ಗೈಡ್ಸ್‌ಗಳು "ಗಾಂಧಿ ಜಯಂತಿ" ಪ್ರಯುಕ್ತ ಸ್ವಚ್ಛಭಾರತ ಅಭಿಯಾನದಲ್ಲಿ ಪಾಲ್ಗೊಂಡಿರುವುದು.



If not delivered, please return to :
**THE EDITOR, Karnataka Scout & Guide**
State Headquarters, Shanthi Gruha
#39, Palace Road, Bengaluru - 560 001
Ph.: 080-22260017, 22267470
e-mail.: shq@bsgkarnataka.org
shanthigruha@scout.org.in
www.bsgkarnataka.org

**Published by : The Bharat Scouts & Guides, Karnataka, State Headquarters**
**Shanthi Gruha** #39, Palace Road, Bengaluru - 560 001. **Publisher & Editor : Chinnaswamy Reddy, Printed by : L. Lingappa M.D. at Sathyasri Printers Pvt. Ltd.,** 16/1, 3rd Cross, 2nd Main, Kasturiba Nagar, Mysore Road, Bengaluru 26